ಕರ್ನಾಟಕ

# ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-16 | Issue No. 03 | March - 2019 | ₹ 10/-

## ಯುಗಾದಿ ಹಬ್ಬದ ಶುಭಾಶಯಗಳು



ಚಾಮರಾಜನಗರ ಜಿಲ್ಲೆಯ ಕುದೇರು ಪ್ರಥಮ ದರ್ಜೆ ಕಾಲೇಜಿನ ರೋವರ್ ಬಿ|| ಮಹದೇವಸ್ವಾಮಿ ಮಾರ್ಚ್ 10 ರಂದು ಮಗುವಿಗೆ ಪೋಲಿಯೋ ಹನಿ ಹಾಕುತ್ತಿರುವುದನ್ನು ಪೋಷಕಿ ವೀಕ್ಷಿಸುತ್ತಿದ್ದಾರೆ.






Major General Charles Frank Bolden, United States Space Envoy & an 'Eagle' Scout Awardee, Mrs. Sara Green Grass, Political and Financial Officer, Mrs. Seetaferral, Information Officer of Environmental Science & Mr. George Mathew of US Consultate, Chennai were honoured by Sri P.G.R. Sindhia with a Shawl, Memento, Bouquet and Our National Flag on 6 March 2019 at 'Kondajji Basappa Auditorium' Bengaluru. Mr. Charles Frank Bolden had an Interactive Session with Cubs-Bulbuls, Scouts-Guides, Rovers-Rangers and Unit Leaders. Sri Kondajji B. Shanmukhappa, Sri M.A. Khalid, State and District Officials were present.



ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಶ್ರೀ ಎಲ್. ನಾರಾಯಣಸ್ವಾಮಿ ಅವರನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾರ್ಚ್ 20 ರಂದು ಭೇಟಿಮಾಡಿ ಪುಷ್ಪಗುಚ್ಛ ನೀಡುತ್ತಿರುವುದು. ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ಕೇಂದ್ರ ಸ್ಥಾನಿಕ ಆಯುಕ್ತ ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ಬಿ.ಬಿ.ಎಂ.ಪಿ. ನೋಡಲ್ ಅಧಿಕಾರಿ ಶ್ರೀ ಎಂ.ಎ. ಚೆಲ್ಲಯ್ಯ ಅವರುಗಳು ಚಿತ್ರದಲ್ಲಿದ್ದಾರೆ.

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಸ್.ಆರ್. ಉಮಾಶಂಕರ್ ಅವರನ್ನು ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾರ್ಚ್ 21 ರಂದು ಭೇಟಿ ಮಾಡಿ ಪುಷ್ಪಗುಚ್ಛ ನೀಡುತ್ತಿರುವುದು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಕೆ. ಗಂಗಪ್ಪಗೌಡ, ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ಶ್ರೀ ಎಂ.ಎ. ಚೆಲ್ಲಯ್ಯ ಅವರುಗಳು ಚಿತ್ರದಲ್ಲಿದ್ದಾರೆ.






ಮಾರ್ಚ್ 1 ರಿಂದ 5 ರ ವರೆಗೆ ಡಾ. ಅನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ ರೋವರ್ಸ್-ರೇಂಜರ್ಸ್ ಪಯೋನಿಯರಿಂಗ್ ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ನಿವೃತ್ತ ಮೇಜರ್ ಜನರಲ್ ಶ್ರೀ ವಿನೋದ್ ಪ್ರಕಾಶ್‌ಸಿಂಗ್ ಬುಕೂನಿ ಅವರು ಮಾತನಾಡುತ್ತಿರುವುದು. ಶ್ರೀ ಪಿ.ಜಿ.ಆರ್. ಸಿಂಧ್ಯ ಶ್ರೀಮತಿ ಬಿ.ಡಿ. ಶಾಂತ, ಶ್ರೀ ಎಂ. ಪ್ರಭಾಕರ ಭಟ್, ಶ್ರೀ ಬಾಬುರಾವ್ ನಿಂಬೂರೆ, ಶ್ರೀ ನಾಗರಾಜ್ ಅವರುಗಳು ಚಿತ್ರದಲ್ಲಿದ್ದಾರೆ.

ಮಾರ್ಚ್ 22ರಂದು ಕಾರವಾರದಲ್ಲಿ ರಾಜ್ಯಮಟ್ಟದ ರೋವರ್ಸ್ ಕಡಲ ತೀರದ ಚಾರಣ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಕೃಷ್ಣಮೂರ್ತಿ, ಸ್ಥಳೀಯ ಸಂಸ್ಥೆ ಅಧ್ಯಕ್ಷರು, ಆರಕ್ಷಕ ಇಲಾಖೆಯ ಶ್ರೀ ಲೋಕೇಶ್, ಶ್ರೀ ಎಂ. ಪ್ರಭಾಕರ್ ಭಟ್, ಎಸ್.ಓ.ಸಿ.(ಎಸ್), ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್, ಶಿಬಿರದ ನಾಯಕ ಶ್ರೀ ಕೆ.ಎಸ್. ಪ್ರತೀಮ್ ಕುಮಾರ್, ಎ.ಎಸ್.ಓ.ಸಿ. ಶ್ರೀ ಕರಿಸಿದ್ದಪ್ಪ ಹಾಗೂ ಇತರರು ಚಿತ್ರದಲ್ಲಿದ್ದಾರೆ.





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE




ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.


## ಪರಿವಿಡಿ



# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,

ಸಸ್ನೇಹ ನಮಸ್ಕಾರಗಳು

ಫೆಬ್ರವರಿ 14ರಂದು ಕಾಶ್ಮೀರದ ಪುಲ್ವಾಮದಲ್ಲಿ ಸಿ.ಆರ್.ಪಿ.ಎಫ್. ಯೋಧರ ಮೇಲಿನ ಉಗ್ರಗಾಮಿಗಳ ಧಾಳಿಯ ಬಗ್ಗೆ ಕಳೆದ ಸಂಚಿಕೆಯಲ್ಲಿ ನನ್ನ ಕಳವಳವನ್ನು ವ್ಯಕ್ತಪಡಿಸಿದ್ದೆ. ನಂತರ ನಮ್ಮ ಸೈನಿಕರು ಉಗ್ರಗಾಮಿಗಳನ್ನು ಮಟ್ಟಹಾಕಿದ್ದಾರೆ. ಭಯೋತ್ಪಾದನೆಗೆ ತಕ್ಕ ಉತ್ತರವನ್ನು ಕೊಟ್ಟಿದ್ದಾರೆ. ಇದಕ್ಕಾಗಿ ಭಾರತೀಯ ಸೇನೆಯನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಶತ್ರುಗಳ ಕೈಗೆಸಿಕ್ಕಿ ತೊಂದರೆಯನ್ನು ಅನುಭವಿಸುತ್ತಿದ್ದರೂ, ಆತ್ಮವಿಶ್ವಾಸವನ್ನು ಕಾಪಾಡಿಕೊಂಡು



ಧೈರ್ಯದಿಂದ ಸಾಂದರ್ಭಿಕ ಸವಾಲನ್ನು ಎದುರಿಸಿದ **ವಿಂಗ್ ಕಮಾಂಡರ್ ಅಭಿನಂದನ್ ವರ್ಧಮಾನ್** ಅವರನ್ನೂಕೂಡ ಈ ಸಂದರ್ಭದಲ್ಲಿ ಅಭಿನಂದಿಸುತ್ತೇನೆ. ಅವರ ಮನೋಸ್ಥೈರ್ಯ ಯುವಕರಿಗೆ ಆದರ್ಶವಾಗಬೇಕು.

ಪ್ರಪಂಚದ ವಿವಿಧ ದೇಶಗಳಲ್ಲಿ ಈ ಭಯೋತ್ಪಾದನಾ ಚಟುವಟಿಕೆಗಳು ಉದ್ಭವಿಸುತ್ತಿರುವುದು ಆತಂಕಕಾರಿ ವಿಷಯ. ಭಯೋತ್ಪಾದನೆಯನ್ನು ಕೊನೆಗಾಣಿಸಿ ಎಲ್ಲೆಡೆಯೂ ಶಾಂತಿ ನೆಲೆಸಬೇಕೆಂಬ ಆಶಯ ನಮ್ಮದು. ಸ್ಕೌಟ್ಸ್ ಚಳವಳಿಯ ಮೂಲ ಉದ್ದೇಶವೂ ಇದಾಗಿದೆ.

ಮುಂದಿನ ತಿಂಗಳು ನಡೆಯಲಿರುವ ಲೋಕಸಭಾ ಚುನಾವಣೆಯಲ್ಲಿ ಮತದಾನದ ಪ್ರಮಾಣ ಹೆಚ್ಚಾಗುವ ಮೂಲಕ ಪ್ರಜಾಪ್ರಭುತ್ವದ ಪ್ರಯೋಗವು ಅತ್ಯಂತ ಯಶಸ್ವಿಯಾಗಿ ನಡೆಯುವಂತಾಗಲು ನಮ್ಮ ಸಂಸ್ಥೆಯ ಮಕ್ಕಳು ರಾಜ್ಯದ ವಿವಿಧ ಭಾಗಗಳಲ್ಲಿ ಮತದಾನ ಜಾಗೃತಿ ಕಾರ್ಯಕ್ರಮಗಳನ್ನು




ನಡೆಸಿದ್ದಾರೆ; ನಡೆಸುತ್ತಿದ್ದಾರೆ. ಇದಕ್ಕಾಗಿ ಎಲ್ಲರನ್ನೂ ಅಭಿನಂದಿಸುತ್ತೇನೆ. ಸ್ಕೌಟ್ಸ್ ಸಂಸ್ಥೆಯು ಪಕ್ಷಾತೀತವಾದ, ವ್ಯಕ್ತಿತ್ವ ನಿರ್ಮಾಣದ ಸಂಸ್ಥೆಯಾಗಿದೆ. ನಾವು ಎಲ್ಲರೀತಿಯ ರಾಜಕೀಯ ತತ್ವಗಳು, ಧೋರಣೆಗಳ ಬಗ್ಗೆ ನಿರ್ಲಿಪ್ತ ಧೋರಣೆಯನ್ನು ಹೊಂದಿದ್ದೇವೆ. ಆದರೆ, ನಾಗರೀಕರಲ್ಲಿ ಜಾಗೃತಿಯನ್ನು ಉಂಟುಮಾಡುವುದು ನಮ್ಮ ಕರ್ತವ್ಯವಾಗಿದೆ. ಓಟಿನ ಅಧಿಕಾರನ್ನುಳ್ಳ ನಮ್ಮ ಸಂಸ್ಥೆಯ ಪದಾಧಿಕಾರಿಗಳು, ರೋವರ್ಸ್-ರೇಂಜರ್ಸ್‌ಗಳು ತಪ್ಪದೇ ಮತದಾನ ಮಾಡಬೇಕು. ಭಾರತದ ನಾಗರೀಕರಾಗಿ ಅದು ನಮ್ಮ ಕರ್ತವ್ಯವಾಗಿದೆ.

ಇನ್ನು ಕೆಲವು ದಿನಗಳಲ್ಲಿ ಶಾಲಾ-ಕಾಲೇಜು ವಿದ್ಯಾರ್ಥಿಗಳ ವಾರ್ಷಿಕ ಪರೀಕ್ಷೆಗಳು ಮುಗಿಯುತ್ತವೆ. ಈ ವಿದ್ಯಾರ್ಥಿಗಳಿಗೆ ಉಜ್ವಲ ಭವಿಷ್ಯವನ್ನು ಹಾರೈಸುತ್ತೇನೆ. ಮಕ್ಕಳು ತಮ್ಮ ರಜಾದಿನಗಳನ್ನು ಉಪಯುಕ್ತವಾಗಿ ಕಳೆಯಬೇಕು. ನಮ್ಮ ಸಂಸ್ಥೆಯಿಂದ 235 ಸ್ಥಳೀಯ ಸಂಸ್ಥೆಗಳಿಗೆ ಬೇಸಿಗೆ ಶಿಬಿರಗಳನ್ನು ನಡೆಸಲು ಆರ್ಥಿಕ ಸಹಾಯವನ್ನು ನೀಡಲಾಗಿದೆ. ಈ ಶಿಬಿರಗಳಲ್ಲಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಭಾಗವಹಿಸಬೇಕು. ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಇಂತಹ ಶಿಬಿರಗಳು ಉಪಯುಕ್ತ. ಮಕ್ಕಳು ಸ್ವಾವಲಂಬಿಗಳಾಗಿ, ಸಮಾಜಮುಖಿಯಾಗಿ, ಇತರರಿಗೆ ಮಾದರಿಯಾಗಿ ಬದುಕುವ ಜೀವನ ಕಲೆಯನ್ನು ಇಂತಹ ಶಿಬಿರಗಳು ರೂಪಿಸುತ್ತವೆ. ಎಲ್ಲಾ ಸ್ಥಳೀಯ ಸಂಸ್ಥೆಗಳು ಈ ಶಿಬಿರಗಳ ಯಶಸ್ಸಿಗೆ ಕಾರ್ಯೋನ್ಮುಖವಾಗುತ್ತವೆಂದು ನಂಬಿದ್ದೇನೆ.





ಏಪ್ರಿಲ್ 28 ರಿಂದ ಮೇ 26ರ ವರೆಗೆ ರಾಜ್ಯದ ಕೇಂದ್ರ ಕಛೇರಿ, ಬೆಂಗಳೂರಿನಲ್ಲಿ ರಾಜ್ಯ ಮಟ್ಟದ ವಿಶೇಷ ಬೇಸಿಗೆ ಶಿಬಿರವನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ ಆಯೋಜಿಸಲಾಗಿದೆ. ನುರಿತ ತಜ್ಞರಿಂದ ಈಜುವಿಕೆ, ಬಿಲ್ಲುಗಾರಿಕೆ, ರೈಫಲ್ ಶೂಟಿಂಗ್, ಯೋಗ ತರಬೇತಿ, ವಿಶೇಷ ನೃತ್ಯ ತರಬೇತಿ ಹಾಗೂ ಸ್ಕೌಟ್ಸ್ ಗೈಡ್ಸ್‌ಗಳ ತರಬೇತಿ ಮತ್ತು ಮಾಹಿತಿಗಳ ಶಿಬಿರ ನಡೆಯಲಿದೆ. ಜಿಲ್ಲಾ ಸಂಸ್ಥೆಗಳು ಅರ್ಹ ಅಭ್ಯರ್ಥಿಗಳನ್ನು ನಮ್ಮ ಸುತ್ತೋಲೆಯ ಪ್ರಕಾರ ಕಳುಹಿಸಿಕೊಡಬೇಕೆಂದು ಕೋರುತ್ತೇನೆ. ನೀವೂ ಕೂಡ ನಿಮ್ಮ ಗೆಳೆಯರು, ಪೋಷಕರು, ಶಿಕ್ಷಕರ ಜೊತೆಗೂಡಿ ನಮ್ಮ ಸಂಸ್ಥೆಯ ಮಾರ್ಗದರ್ಶನದಿಂದ ಉಪಯುಕ್ತ ಕಾರ್ಯಕ್ರಮಗಳನ್ನು ರೂಪಿಸಿ. ಸಾಮಾಜಿಕ ನಾಯಕತ್ವವನ್ನು ವಹಿಸಿಕೊಳ್ಳಿ.

ಕಳೆದ ಶೈಕ್ಷಣಿಕ ವರ್ಷದಲ್ಲಿ ಸ್ಕೌಟ್ಸ್ ಚಳವಳಿಯು ಸಕಾರಾತ್ಮಕವಾಗಿ ಬೆಳೆಯಲು ಹೆಚ್ಚು-ಹೆಚ್ಚು ಜನರನ್ನು ತಲುಪುವ ನಮ್ಮ ಪ್ರಯತ್ನ ಯಶಸ್ವಿಯಾಗುತ್ತಿದೆ ಎಂದು ನಾನು ಭಾವಿಸಿದ್ದೇನೆ. ವಿಶ್ವವಿದ್ಯಾನಿಲಯಗಳಲ್ಲೂ ರೋವರ್ಸ್ /ರೇಂಜರ್ಸ್ ಚಟುವಟಿಕೆಗಳನ್ನು ಹೆಚ್ಚುವಮಾಡಲು ಸತತ ಪ್ರಯತ್ನ ಮಾಡುತ್ತಿದ್ದೇವೆ. ಈ ದಿಸೆಯಲ್ಲಿ ಮಾರ್ಚ್ ತಿಂಗಳಿನಲ್ಲಿ ರಾಜ್ಯದ ಎಲ್ಲಾ 6ವಿಭಾಗಗಳಲ್ಲಿ ರೋವರ್ಸ್ ಮತ್ತು ರೇಂಜರ್ಸ್ ನಾಯಕರುಗಳ ಒಂದು ದಿನದ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. 500ಕ್ಕೂ ಹೆಚ್ಚು ಜನರು ಭಾಗವಹಿಸಿದ್ದು ಬಹಳ ಸಂತೋಷದ ವಿಷಯವಾಗಿದೆ. ಕರ್ನಾಟಕದಲ್ಲಿ 2018-19ರ ಶೈಕ್ಷಣಿಕ ವರ್ಷದಲ್ಲಿ ಅಂಕಿ-ಅಂಶದ ಗಣತಿಯು 6 ಲಕ್ಷವನ್ನು ಮುಟ್ಟಲು ನಮ್ಮ ಗುರಿ ಮತ್ತು ಪ್ರಯತ್ನ ಸಾಕಾರಗೊಳ್ಳುತ್ತಿರುವುದು ಹೆಮ್ಮೆಯ ವಿಚಾರ. ಈ ಹಿನ್ನೆಲೆಯಲ್ಲಿ ವಿಶ್ವವಿದ್ಯಾನಿಲಯಗಳ ಉಪ ಕುಲಪತಿಗಳು ಮತ್ತು ನೋಡೆಲ್ ಅಧಿಕಾರಿಗಳ ಸಹಕಾರ ಶ್ಲಾಘನೀಯ.

ನಮ್ಮ ರಾಜ್ಯ ಸಂಸ್ಥೆಯ ವತಿಯಿಂದ 2018-19ನೇ ಸಾಲಿನಲ್ಲಿ ಹಮ್ಮಿಕೊಂಡಿದ್ದ ಚಟುವಟಿಕೆ, ಕಾರ್ಯಕ್ರಮ ಮತ್ತು ತರಬೇತಿಗಳಲ್ಲಿ ಶೇ.90 ರಷ್ಟು ಸಾಧನೆ ಮಾಡಿರುವುದು ಹೆಮ್ಮೆಯ ವಿಚಾರ. ಇದಕ್ಕೆ ಸಹಕಾರ ಕೊಟ್ಟಿರುವ ಗೌರವಾನ್ವಿತ ರಾಜ್ಯ ಪಾಲರು, ಸನ್ಮಾನ್ಯ ಮುಖ್ಯ ಮಂತ್ರಿಗಳು, ರಾಜ್ಯ ಸರ್ಕಾರದ ಎಲ್ಲಾ ಸಚಿವರುಗಳು, ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು, ಜಂಟಿ ನಿರ್ದೇಶಕರು, ಉಪನಿರ್ದೇಶಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು, ಎಲ್ಲಾ ಉಪನಿರ್ದೇಶಕರು, ಎಲ್ಲಾ ವಿಶ್ವವಿದ್ಯಾಲಯಗಳ ಉಪಕುಲಪತಿಗಳು ಮತ್ತು ನೋಡೆಲ್ ಅಧಿಕಾರಿಗಳು ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಅಧಿಕಾರಿಗಳಿಗೂ ನಮ್ಮ ಸಂಸ್ಥೆಯು ಚಿರಋಣಿಯಾಗಿದೆ. ನಮ್ಮ ಸಂಸ್ಥೆಯ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ನೀಡಿರುವ ಸಹಕಾರವನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ಅದೇ ರೀತಿ 2019-20ನೇ ಸಾಲಿನ ಕಾರ್ಯಕ್ರಮ, ಚಟುವಟಿಕೆ ಮತ್ತು ತರಬೇತಿಗಳ ವಾರ್ಷಿಕ ಯೋಜನೆಯನ್ನು ಸಿದ್ಧಪಡಿಸುವ ಪ್ರಕ್ರಿಯೆಯಲ್ಲಿದ್ದೇವೆ. ಇದಕ್ಕಾಗಿ ನಮ್ಮ ಮುಖಂಡರು ಮತ್ತು ಪದಾಧಿಕಾರಿಗಳೊಂದಿಗೆ ಸಮಾಲೋಚಿಸಲಾಗಿದೆ. ಸಂಸ್ಥೆಯ ಹಿರಿಯ ನಾಯಕರಾದ ಶ್ರೀ ಸಿ.ಪಿ. ಪರಮೇಶ್ವರ್ ಮತ್ತು ಇತರೆ 4 ಸದಸ್ಯರುಗಳು, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್ ಮತ್ತು ಗೈಡ್ಸ್) ಮತ್ತು ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್ ಮತ್ತು ಗೈಡ್ಸ್)ಗಳನ್ನೊಳಗೊಂಡ ಸಮಿತಿಯನ್ನು ರಚಿಸಿದ್ದು, ಆ ಸಮಿತಿಯ ವರದಿಯನ್ನು ಪಡೆಯಲಾಗಿದೆ. ಜಿಲ್ಲಾ ಮುಖ್ಯ ಆಯುಕ್ತರು ಲೀಡರ್ಸ್ ಟ್ರೈನರ್ಸ್‌ಗಳು, ಸಂಘಟಕರುಗಳ ಅಭಿಪ್ರಾಯಗಳನ್ನು ಪಡೆಯಲಾಗಿದೆ. ವಿಶ್ವವಿದ್ಯಾನಿಲಯಗಳ ಆಯ್ದ ನೋಡೆಲ್ ಅಧಿಕಾರಿಗಳ ಸಮಿತಿಯೊಂದನ್ನು ರಚಿಸಿ ಸಲಹೆಗಳನ್ನು ಪಡೆಯಲಾಗಿದೆ. ಈ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆಯನ್ನು ಸದ್ಯದಲ್ಲಿಯೇ ಸಿದ್ಧಪಡಿಸಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿ-ಕೊಂಡಿರುವ ಯಾರಾದರೂ ಕೂಡಲೇ ರಾಜ್ಯ ಸಂಸ್ಥೆಗೆ ತಮ್ಮ ಸಲಹೆ / ಅಭಿಪ್ರಾಯಗಳನ್ನು ನೀಡಬಹುದಾಗಿದೆ.

ಮಾಚ್ 6ರಂದು "ಬಾಹ್ಯಾಕಾಶದ ಭವಿಷ್ಯ" ಎಂಬ ವಿಷಯದ ಬಗ್ಗೆ ಅಮೇರಿಕಾದ ಬಾಹ್ಯಾಕಾಶ ರಾಯಭಾರಿಯಾಗಿರುವ ಮೇಜರ್ ಜನರಲ್ ಚಾರ್ಲ್ಸ್ ಫ್ರಾಂಕ್ ಬೋಲ್ಡನ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್‌ಗಳೊಂದಿಗೆ ತಮ್ಮ ಅನುಭವವನ್ನು ಹಂಚಿಕೊಂಡರು. **NASA**ದ ವ್ಯವಸ್ಥಾಪನೆ, ಅಂತರಿಕ್ಷ ಶಟಲ್‌ಗಳು, ಉಪಗ್ರಹಗಳ ಉಡಾವಣೆ, ಅಂತರಿಕ್ಷ ಪ್ರಯಾಣ, ಅಂತರಿಕ್ಷ ನಿಲ್ದಾಣ, ತರಬೇತಿಯ ಮಾದರಿಗಳು, ಮಹಿಳಾ ಅಂತರಿಕ್ಷಯಾನಿಗಳ ಬಗ್ಗೆ ಶ್ರಾವ್ಯ ಮತ್ತು ದೃಶ್ಯ ಮಾಧ್ಯಮಗಳ ಮೂಲಕ ಆಸಕ್ತಿಯುತವಾಗಿ ವಿವರಿಸಿದರು. ಪ್ರಶ್ನೋತ್ತರ ವೇಳೆಯನ್ನು ಉಪಯುಕ್ತವಾಗಿ ನಮ್ಮ

ಮಕ್ಕಳುಗಳು ಉಪಯೋಗಿಸಿಕೊಂಡಿದ್ದು ನನಗೆ ಸಂತೋಷವನ್ನು ಉಂಟುಮಾಡಿತು. ಚನ್ನೈನಲ್ಲಿರುವ ಅಮೆರಿಕಾದ ದೂತವಾಸದ ಅಧಿಕಾರಿಗಳಾದ ಶ್ರೀ ಜಾರ್ಜ್ ಮ್ಯಾಥ್ಯೂ, ರಾಜಕೀಯ ಮತ್ತು ಆರ್ಥಿಕ ಅಧಿಕಾರಿಯಾದ ಶ್ರೀಮತಿ ಸಾರಾಗ್ರೀನ್ ಗ್ರಾಸ್ ಮತ್ತು ಪರಿಸರ ವಿಜ್ಞಾನದ ಮಾಹಿತಿ ಅಧಿಕಾರಿ ಶ್ರೀಮತಿ ಸೀಟಾಫೆರೆಲ್ ಅವರುಗಳು ಭಾಗವಹಿಸಿದ್ದು ವಿಶೇಷವಾಗಿತ್ತು. ಇಂತಹ ಚಟುವಟಿಕೆಗಳು ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಘನತೆಯನ್ನು ಹೆಚ್ಚುಮಾಡುವುದರಲ್ಲಿ ಯಾವ ಸಂಶಯವೂ ಇಲ್ಲ.

ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮಾಸ ಪತ್ರಿಕೆಯಲ್ಲಿ ಜಿಲ್ಲಾ ಸಂಸ್ಥೆಗಳ ಚಟುವಟಿಕೆಯ ವರದಿಯನ್ನು ಪ್ರಕಟಿಸುತ್ತಿದ್ದೇವೆ. 2018 ರಲ್ಲಿ ಸರಾಸರಿ ಪ್ರತಿ ತಿಂಗಳು 19 ಜಿಲ್ಲಾ ವರದಿಗಳು ಮಾತ್ರ ಪ್ರಕಟವಾಗಿದೆ. ಒಟ್ಟು 35 ಜಿಲ್ಲಾಸಂಸ್ಥೆಗಳಿವೆ. ಕೆಲವು ಜಿಲ್ಲೆಗಳು ಒಂದೂ ವರದಿಯನ್ನೂ ಸಲ್ಲಿಸಿಲ್ಲ. ಒಂದೆರಡು ಜಿಲ್ಲೆಗಳು ಹನ್ನೆರಡು ವರದಿಯನ್ನೂ ನೀಡಿದ್ದಾರೆ. ಮಾಸಿಕ ಪತ್ರಿಕೆಯಲ್ಲಿ ನೀವು ಮಾಡಿದ ಚಟುವಟಿಕೆಗಳು ವರದಿಯಾಗಬೇಕೆಂದು ನನ್ನ ಅಭಿಪ್ರಾಯ. ದಯವಿಟ್ಟು ಮುಂದಿನ ತಿಂಗಳಿಂದ ಎಲ್ಲಾ 35 ಜಿಲ್ಲಾ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನು ಆಯಾ ತಿಂಗಳ 20ನೇ ದಿನಾಂಕದೊಳಗೆ ಕಳುಹಿಸಿಕೊಡಬೇಕೆಂದು ಕೋರುತ್ತೇನೆ.



**ಏಪ್ರಿಲ್ 6 ರಂದು ಯುಗಾದಿ ಹಬ್ಬ, ಹೊಸ ಸಂವತ್ಸರ ನಿಮಗೆಲ್ಲರಿಗೂ ಶುಭವಾಗಲೆಂದು ಹೃದಯಪೂರ್ವಕವಾಗಿ ಆಶಿಸುತ್ತೇನೆ.**

**ರಾಮನವಮಿ, ಮಹಾವೀರ ಜಯಂತಿ, ಗುಡ್‌ಫ್ರೈಡೆ, ಮುಂತಾದ ಹಬ್ಬಗಳು ಬರುತ್ತಿವೆ. ಏಪ್ರಿಲ್ 14ರಂದು ಸಂವಿಧಾನ ಶಿಲ್ಪಿ ಡಾ॥ ಬಿ.ಆರ್. ಅಂಬೇಡ್ಕರ್‌ರವರ 128ನೇ ಜಯಂತಿ.** ಭಾರತದ ರಾಜಕೀಯ ಐಕ್ಯತೆಯನ್ನು ಕಾಪಾಡಿಕೊಂಡು ಬರಲು ಭದ್ರ ಬುನಾದಿಯನ್ನು ಒದಗಿಸಿರುವ ನಮ್ಮ ಸಂವಿಧಾನದ ಪ್ರಮುಖ ರೂವಾರಿ ಡಾ॥ ಬಿ.ಆರ್. ಅಂಬೇಡ್ಕರ್ ಅವರಾಗಿದ್ದಾರೆ. ಕಡುಬಡತನದ ದಲಿತ ಕುಟುಂಬದಿಂದ ಬಂದ ಡಾ॥ ಬಿ.ಆರ್. ಅಂಬೇಡ್ಕರ್ ಅವರು ತಮ್ಮ ಶ್ರಮ, ಶ್ರದ್ಧೆಗಳಿಂದ ಶಿಕ್ಷಣವನ್ನು ಪಡೆದವರು. ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿಗೆ ಅವರು ನೀಡಿರುವ ಕಾಣಿಕೆ ಅಪಾರವಾದುದು. ಅವರ ತ್ಯಾಗ ಮತ್ತು ಆದರ್ಶಗಳನ್ನು ನಾವೆಲ್ಲರೂ ಅಳವಡಿಸಿಕೊಳ್ಳಬೇಕು.



"A Great man is different from an eminent one is that he is ready to be the Servant of the society."

-Dr. B.R. Ambedkar



ರಾಜ್ಯದಲ್ಲಿ ಸ್ಕೌಟ್ ಗೈಡ್ ಚಳವಳಿಗೆ ಭದ್ರಬುನಾದಿಯನ್ನು ಹಾಕುವಲ್ಲಿ ಶ್ರಮಿಸಿದ ದಿವಂಗತ ಕೊಂಡಜ್ಜಿ ಬಸಪ್ಪರವರ ಪುತ್ರರಾದ ಶ್ರೀ ಕೆ.ಬಿ. ಲಿಂಗರಾಜ್ ಅವರು ನಮ್ಮನ್ನಗಲಿ ಒಂದು ತಿಂಗಳಾಯಿತು. ಶ್ರೀ ಲಿಂಗರಾಜ್ ಅವರು ತಮ್ಮ ತಂದೆಯವರ ಹಾದಿಯಲ್ಲಿಯೇ ನಮ್ಮ ಸಂಸ್ಥೆಯನ್ನು ಕಟ್ಟಿ ಬೆಳೆಸುವಲ್ಲಿ ದುಡಿದವರು. ವೈಯಕ್ತಿಕವಾಗಿ ನನಗೆ ಬಹಳ ಆತ್ಮೀಯರಾಗಿದ್ದ ಲಿಂಗರಾಜ್ ಅವರ ಅಗಲಿಕೆಯಿಂದ ನಮ್ಮ ಸಂಸ್ಥೆಗೆ ನಷ್ಟವಾಗಿರುವ ಜೊತೆಗೆ ಒಬ್ಬ ಹಿತಚಿಂತಕನನ್ನು ಕಳೆದುಕೊಂಡಂತಾಗಿದೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇನೆ.

ಮುಂದಿನ ದಿನಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ಇನ್ನೂ ಹೆಚ್ಚಾಗಿ ನಡೆಯಲಿ, ಸ್ಕೌಟ್ಸ್-ಗೈಡ್ಸ್‌ಚಳವಳಿಯ ಆದರ್ಶಗಳು ಎಲ್ಲೆಡೆಯಲ್ಲೂ ಹಬ್ಬಲಿ ಎಂದು ಆಶಿಸುತ್ತೇನೆ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ



**(ಪಿ.ಜಿ.ಆರ್. ಸಿಂಧ್ಯ)**

**ರಾಜ್ಯ ಮುಖ್ಯ ಆಯುಕ್ತರು**

# Talk on "Future on Space" by Major General Charles Frank Bolden

**United States Space Envoy and his Interaction with Scouts & Guides at State Headquarters on 6th March 2019.**




Bharat Scouts & Guides Karnataka had arranged a talk by Major General Charles Frank Bolden, United States Space Convoy & Former Administrator of NASA, USA.He had interaction with number of Scouts& Guides and explained about NASA Administration, Space Shuttles, Launch of Satellite, Space Travel, Air Station, Training Methods, Women Astronauts along with Audio Visual Aids in a very methodical and interesting manner

Scouts & Guides were thrilled and sought more information about some of the aspects. The Question Answer session went on and they got convincing replies in simple English which they were able to understand.

Presence of Mr George Mathew of US Consulate from Chennai who guided us and co-operated for the visit of Mr Bolden and of Mrs Sara Green Grass, Political and Financial Officer, Mrs Seeta Ferral, Information Officer of Environmental Science added colour to the programme.

Sri P.G.R.Sindhia, State Chief Commissioner, Bharat Scouts & Guides explained about the growth of the movement and activities conducted.He also described the significance of the programme and congratulated Mr. Bolden for the information he gave to the Scouts &Guides about "Future on Space" and honoured him and other guests from USA & US Consulate, Chennai on the occasion.He also wished that at least quite a few of the Scouts and Guides will find a place among the NASA Scientists/Astronauts in future.

Sri Kondajji B. Shanmukhappa Vice-President, Sri M.A. Khalid SC(S) Sri M.A. Chellaiah, Nodal Officer of BBMP District, Smt B.V. Ramalatha, Joint State Secretary (G) Sri L.T. Lokesh, Assistant Secretary, Sri M. Prabhakar Bhat SOC(S) & Office Bearers of State Headquarters & North & South Districts Parents, Principals of Schools ,Unit Leaders from Bengaluru North & South and BBMP District were present.

Sri K. Gangappa Gowda, State Secretary welcomed the guests, State Chief Commissioner and others present.Smt Stella Amarapalli Guide Captain Bengaluru South District did the Master of Ceremony, of the programme. Smt. C. Manjula SOC(G) proposed s Vote of thanks.

# ರೋವರ್ಸ್ - ರೇಂಜರ್ಸ್

# ಪಯೋನಿಯರಿಂಗ್ ಶಿಬಿರ



ಮಾರ್ಚ್ 1 ರಿಂದ 5 ರ ವರೆಗೆ ನಡೆದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಮಟ್ಟದ ರೋವರ್-ರೇಂಜರ್ಸ್ ಪಯೋನಿಯರಿಂಗ್ ಮತ್ತು ಸಾಹಸ ತರಬೇತಿ ಶಿಬಿರವನ್ನು ಡಾ॥ ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ. ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರದಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನೆಯನ್ನು ನಿವೃತ್ತ ಮೇಜರ್ ಜನರಲ್ ವಿನೋದ್ ಪ್ರಕಾಶ್‌ಸಿಂಗ್ ಬುಕೂನಿ ಅವರು ನೆರವೇರಿಸಿ ತಮ್ಮ ಉದ್ಘಾಟನಾ ಭಾಷಣದಲ್ಲಿ ಭಯೋತ್ಪಾದನೆ ಮಟ್ಟಹಾಕಲು ಜಗತ್ತಿನ ಎಲ್ಲಾ ರಾಷ್ಟ್ರಗಳು ಒಂದಾಗಬೇಕು. ನಮ್ಮ ದೇಶದ ಇತಿಹಾಸದಲ್ಲಿ ಯಾರಮೇಲೂ ಯುದ್ಧಮಾಡಿರುವ ಪುರಾವೆಗಳಿಲ್ಲ. ಆದರೆ ಇಂದು ಭಯೋತ್ಪಾದನೆ ಹತ್ತಿಕ್ಕಲು ಸೇನೆ ದಾಳಿ ನಡೆಸಬೇಕಾದ ಅನಿವಾರ್ಯತೆ ಇದೆ ಎಂದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಇವರು ಅಧ್ಯಕ್ಷೀಯ ಭಾಷಣದಲ್ಲಿ ರೋವರ್ಸ್-ರೇಂಜರ್ಸ್ ತರಬೇತಿ ಪಡೆದವರಿಗೆ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಸೇರಿದಂತೆ ವಿವಿಧ ಇಲಾಖೆಗಳಲ್ಲಿ ಹೆಚ್ಚಿನ ಮೀಸಲಾತಿ ಕಲ್ಪಿಸುವಂತೆ ಒತ್ತಾಯಿಸಲಾಗಿದೆ. ರೋವರ್ಸ್-ರೇಂಜರ್ಸ್‌ಗಳು ಬಂಡಿಪುರ ಕಾಡ್ಗಿಚ್ಚು ನಂದಿಸುವಲ್ಲಿ ಸಲ್ಲಿಸಿದ ಸೇವೆ ಹಾಗೂ ಕೊಡಗಿನ ಪ್ರವಾಹ ಸಂದರ್ಭದಲ್ಲಿ ನಿರಾಶ್ರಿತರಿಗೆ ಸಲ್ಲಿಸಿದ ಸೇವೆ ಅದ್ಭುತ ಎಂದರು.

ಮಾರ್ಚ್ 4 ರಂದು ಶಿಬಿರದ ಸಮಾರೋಪ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ಅಧ್ಯಕ್ಷತೆಯನ್ನು ವಹಿಸಿದ್ದರು. ರೋವರ್-ರೇಂಜರ್‌ಗಳು ನಿರ್ಮಿಸಿದ ಸಾಹಸ ಚಟುವಟಿಕೆಗಳಾದ ಟ್ರೀ ಕ್ಲೈಂಬಿಂಗ್, ಮೇರಿಗೋರೌಂಡ್, ಹಗ್ಗದ ಸಹಾಯದಿಂದ ನಿರ್ಮಿಸಿದ ವಿವಿಧ ಸೇತುವೆಗಳು (ಮಂಕಿ ಬ್ರಿಡ್ಜ್, ಕಮಾಂಡೋ ಬ್ರಿಡ್ಜ್, ಸಸ್ಪೆಂಷನ್ ಬ್ರಿಡ್ಜ್) ಕಾವಲು ಗೋಪುರ, ವಾಲ್ ಕ್ಲೈಂಬಿಂಗ್, ಸುಹಾರಿತ ತೊಟ್ಟಿಲು, ಸುದಾರಿತ ಧ್ವಜಸ್ತಂಭ ರಚನೆಗಳನ್ನು ವೀಕ್ಷಿಸಿದರು. ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸ್ವಚ್ಛ ಭಾರತ ಕಾರ್ಯಕ್ರಮ. ಗಿಡ ನೆಡುವ ಕಾರ್ಯಕ್ರಮಗಳಲ್ಲಿ ಸ್ಕೌಟ್ಸ್-ಗೈಡ್ಸ್ ಸಲ್ಲಿಸಿದ ಸೇವೆಯನ್ನು ಸ್ಮರಿಸಿದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎ. ಚೆಲ್ಲಯ್ಯ, ನೋಡಲ್ ಅಧಿಕಾರಿ ಬಿ.ಬಿ.ಎಂ.ಪಿ. ಜಿಲ್ಲಾ ಸಂಸ್ಥೆ ಇವರು ಭಾಗವಹಿಸಿದರು. ಶ್ರೀ ಜಿಮ್ಮಿ ಸಿಕ್ವೇರಾ, ರೋವರ್ ಶಿಬಿರದ ನಾಯಕರು ಹಾಗೂ ಶ್ರೀಮತಿ ಮಲ್ಲೇಶ್ವರಿ ಜುಜಾರೆ, ಎ.ಎಸ್.ಓ.ಸಿ.(ಗೈ) ರೇಂಜರ್ ಶಿಬಿರದ ನಾಯಕರು ಶಿಬಿರದ ವರದಿ ನೀಡಿದರು. ಶ್ರೀಮತಿ ಮಂಜುಳಾ, ಎಸ್.ಓ.ಸಿ.(ಗೈ) ಸ್ವಾಗತಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ಎಸ್.ಓ.ಸಿ.(ಸ್ಕೌ) ಧನ್ಯವಾದ ನೀಡಿದರು. ವಿಶ್ವ ಜಲದಿನಾಚರಣೆ ಅಂಗವಾಗಿ ವಿದ್ಯಾರ್ಥಿಗಳಿಗೆ ಭಾಷಣ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಶಿಬಿರಾಗ್ನಿ ಕಾರ್ಯಕ್ರಮ, ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದಲ್ಲಿ 28 ಜಿಲ್ಲೆಗಳಿಂದ 350 ರೋವರ್ಸ್, 200 ರೇಂಜರ್ಸ್ ಉತ್ಸಾಹ ಹಾಗೂ ಹುಮ್ಮಸ್ಸಿನಿಂದ ವಿವಿದ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು.





# ರಾಜ್ಯಮಟ್ಟದ ರೇಂಜರ್ಸ್

# ಸಮುದ್ರ ತೀರ ಚಾರಣ ಶಿಬಿರ

ಫೆಬ್ರವರಿ 26 ರಿಂದ ಮಾರ್ಚ್ 2ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವತಿಯಿಂದ ದಕ್ಷಿಣ ಕನ್ನಡ ಜಿಲ್ಲೆಯ ಉಚ್ಚಿಲದಿಂದ ಮುಲ್ಕಿಯವರೆಗೆ ರಾಜ್ಯಮಟ್ಟದ ರೇಂಜರ್ಸ್ ಸಮುದ್ರ ತೀರ ಚಾರಣ ಶಿಬಿರವನ್ನು ಸಂಘಟಿಸಲಾಯಿತು. ಶಿಬಿರದಲ್ಲಿ ಕರ್ನಾಟಕ ರಾಜ್ಯದ ಬೆಳಗಾವಿ, ಬೆಂಗಳೂರು ಉತ್ತರ, ಚಾಮರಾಜನಗರ, ಚಿಕ್ಕಮಗಳೂರು, ಚಿಕ್ಕಬಳ್ಳಾಪುರ, ಚಿತ್ರದುರ್ಗ, ದಕ್ಷಿಣ ಕನ್ನಡ, ಕಾರವಾರ, ಮೈಸೂರು, ಶಿವಮೊಗ್ಗ, ತುಮಕೂರು, ಉಡುಪಿ ಜಿಲ್ಲೆಗಳಿಂದ 147 ರೇಂಜರ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕಿಯಾಗಿ ಶ್ರೀಮತಿ ಶಶಿರೇಖಾ ಹಾಗೂ ಶಿಬಿರ ಸಂಯೋಜಕರಾಗಿ ಶ್ರೀಮತಿ ಅರುಣಾಮಾಲ, ಭಾಗವಹಿಸಿದ್ದರು.



ಸಂಜೆ ನಡೆದ"ಕಡಲ ತೀರದ ಚಾರಣ"ದ ಉದ್ಘಾಟನೆ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ. ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿಕೊಂಡಿದ್ದರು. ಸರ್ಕಾರದ ಸಹಾಯದಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಾಕಷ್ಟು ಕಾರ್ಯಕ್ರಮ ನಡೆಸಲಾಗಿದೆ. ಕಬ್ಸ್, ಬುಲ್‌ಬುಲ್ ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಜಿಲ್ಲಾ ದರ್ಶನ ಹಮ್ಮಿಕೊಳ್ಳಲಾಗಿದೆ. ಈ ವರ್ಷ ರೋವರ್ಸ್-ರೇಂಜರ್ಸ್‌ಗಳಿಗೆ ಭಾರತ ದರ್ಶನಕ್ಕಾಗಿ ಹಣ ಸಧ್ಯದಲ್ಲಿ ಬಿಡುಗಡೆ ಮಾಡಲಾಗುವುದು ಎಂದು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಮುಖ್ಯ ಆಯುಕ್ತರು ಶ್ರೀ ಪಿ.ಜಿ.ಆರ್. ಸಿಂಧ್ಯಾ ಹೇಳಿದರು. ಇವರು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಹಾಗೂ ದ.ಕ. ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ನಾಲ್ಕು ದಿನ ನಡೆದ ರಾಜ್ಯಮಟ್ಟದ ರೇಂಜರ್ಸ್ ಕಡಲ ತೀರ ಚಾರಣ ಶಿಬಿರಕ್ಕೆ ಉಚ್ಚಿಲ ಬೋವಿ ಶಾಲೆಯಲ್ಲಿ ಚಾಲನೆ ನೀಡಿ ಮಾತನಾಡಿದರು.

ಜಿಲ್ಲಾ ಉಸ್ತುವರಿ ಸಚಿವ ಶ್ರೀ ಯು.ಟಿ. ಖಾದರ್, ಸೋಮೇಶ್ವರ ಗ್ರಾ.ಪಂ ಅಧ್ಯಕ್ಷ ಶ್ರೀ ರಾಜೇಶ್ ಉಚ್ಚಿಲ್, ಬೋವಿ ವಿಧ್ಯಾ ಸಂಸ್ಥೆಗಳ ಅಧ್ಯಕ್ಷ ಶ್ರೀ ಚಿದಾನಂದ ಉಚ್ಚಿಲ್, ಸಂಚಾಲಕ ಶ್ರೀ ದೇವದಾಸ್ ಟಿ. ಉಚ್ಚಿಲ್, ಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಹಾಯಕ ಕಾರ್ಯದರ್ಶಿ ಶ್ರೀ ಎಲ್.ಟಿ. ಲೋಕೇಶ್, ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್ ಸ್ವಾಗತಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ ವಂದಿಸಿದರು. ಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ ಕಾರ್ಯಕ್ರಮ ನಿರೂಪಿಸಿದರು.

ಭಾರತ್ ಸ್ಕೌಟ್ಸ್-ಗೈಡ್ಸ್ ಮೂಲಕ ಶಿಕ್ಷಣದ ಅವಧಿಯಲ್ಲಿ ಭೌಗೋಳಿಕ ಹಾಗೂ ಸಾಮಾಜಿಕ ಅಧ್ಯಯನ ನಡೆಸಲು ವಿದ್ಯಾರ್ಥಿಗಳಿಗೆ ಉತ್ತಮ ಅವಕಾಶ ದೊರೆಯುತ್ತಿದ್ದು ಅದನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ಮಾಜಿ ಸಚಿವ ಶ್ರೀ ಕೆ. ಅಭಯಚಂದ್ರ ಜೈನ್ ಹೇಳಿದರು. ಮುಲ್ಕಿಯ ಬಪ್ಪನಾಡು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನದ ಅನ್ನಪೂರ್ಣ ಸಭಾಗೃಹದಲ್ಲಿ ಶಿಬಿರದ ಸಮಾರೋಪ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿ ಮಾತನಾಡಿದರು. ಸ್ಕೌಟ್-ಗೈಡ್ ರಾಜ್ಯ ಆಯುಕ್ತೆ ಶ್ರೀಮತಿ ಗೀತಾ ನಟರಾಜ್‌ರವರು ದಿಕ್ಸೂಚಿ ಬಾಷಣಗೈದರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ರಾಜ್ಯಾಧ್ಯಕ್ಷ ಶ್ರೀ ಹರಿಕೃಷ್ಣ ಪುನರೂರು ಅವರು ವಹಿಸಿದ್ದು ಮೂಲ್ಕಿ ನಗರದ ಪಂಚಾಯತ್ ಅಧ್ಯಕ್ಷ ಸುನೀಲ್ ಆಳ್ವ, ಮೂಲ್ಕಿಯ ಬಪ್ಪನಾಡು ದೇವಳದ ಆಡಳಿತ ಸಮಿತಿ ಅಧ್ಯಕ್ಷ ಶ್ರೀ ಎನ್.ಎಸ್. ಮನೋಹರ್ ಶೆಟ್ಟಿ, ಅನುವಂಶಿಕ ಮೊಕ್ತೇಸರರ ದುಗ್ಗಣ್ಣ ಸಾವಂತರು, ಕಾರ್ಯ ನಿರ್ವಹಣಾಧಿಕಾರಿ ಶ್ರೀಮತಿ ಜಯಮ್ಮ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್. ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎಂ.ಜಿ. ಕಜೆ ಜಿಲ್ಲಾ ಕಾರ್ಯದರ್ಶಿ, ಶ್ರೀ ವಾಸುದೇವ ಬೋಳೂರು ಜಿಲ್ಲಾ ಕೋಶಾಧಿಕಾರಿ, ಶಿಬಿರದ ನಾಯಕಿ ಶ್ರೀಮತಿ ಶಶಿರೇಖಾ ಬೆಳಗಾವಿ, ಮುಂತಾದವರು ಉಪಸ್ಥಿತರಿದ್ದರು.

ಪ್ರಥಮ ದರ್ಜೆ ಕಾಲೇಜು ಪ್ರಾಂಶುಪಾಲರುಗಳ
ಮತ್ತು ರೋವರ್ ಸ್ಕೌಟ್ ಲೀಡರ್/ ರೇಂಜರ್ ಲೀಡರ್ಸ್‌ಗಳಿಗೆ

# ವಿಭಾಗ ಮಟ್ಟದ ಮಾಹಿತಿ ಶಿಬಿರಗಳು

**ಮಂಗಳೂರು ವಿಭಾಗ:** ಫೆಬ್ರವರಿ 18ರಂದು ಪ್ರಥಮ ದರ್ಜೆ ಕಾಲೇಜು ಪ್ರಾಂಶುಪಾಲರುಗಳ, ರೋವರ್ ಸ್ಕೌಟ್ ಲೀಡರ್/ ರೇಂಜರ್ ಲೀಡರ್‌ಗಳ ಮಾಹಿತಿ ಶಿಬಿರವನ್ನು ಜಿಲ್ಲಾ ಸಂಸ್ಥೆ ಮಂಗಳೂರಿನ ಸ್ಕೌಟ್ಸ್ ಭವನದಲ್ಲಿ ಏರ್ಪಡಿಸಲಾಗಿತ್ತು. ಶಿಬಿರದಲ್ಲಿ ವಿವಿಧ ಜಿಲ್ಲೆಗಳಿಂದ 24 ಪ್ರಾಂಶುಪಾಲರುಗಳು, 30 ರೋವರ್ ಸ್ಕೌಟ್ ಲೀಡರ್, 36 ರೇಂಜರ್ ಲೀಡರ್ಸ್‌ಗಳು, ಭಾಗವಹಿಸಿದ್ದರು.



ಕಾರ್ಯಕ್ರಮದ ಉದ್ಘಾಟನೆಯನ್ನು ಡಾ. ಶ್ರೀಧರ್ ಮಣಿಯಾಣಿ ವಿಶೇಷ ಅಧಿಕಾರಿ, ಜಂಟಿ ನಿರ್ದೇಶಕರ ಕಛೇರಿ, ಮಂಗಳೂರು, ಸಸಿಗೆ ನೀರು ಹಾಕುವುದರ ಮೂಲಕ ನೆರವೇರಿಸಿ, ಈ ಕಾರ್ಯಕ್ರಮದ ಮುಖ್ಯ ಉದ್ದೇಶದ ಬಗ್ಗೆ ಮಾಹಿತಿ ನೀಡಿದರು. ಈ ಸಂದರ್ಭದಲ್ಲಿ ರಾಜ್ಯ / ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.

**ಧಾರವಾಡ ವಿಭಾಗ:** ಫೆಬ್ರವರಿ 25ರಂದು ಜಿಲ್ಲಾ ಸಂಸ್ಥೆ ಧಾರವಾಡದಲ್ಲಿ ನಡೆದ ಮಾಹಿತಿ ಶಿಬಿರವನ್ನು ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಇವರು ಸಸಿಗೆ ನೀರು ಹಾಕುವುದರ ಮೂಲಕ ಉದ್ಘಾಟಿಸಿದರು. ರಾಜ್ಯ ಸಂಸ್ಥೆಯಿಂದ ನಿಯೋಜನೆಗೊಂಡ ಸಂಪನ್ಮೂಲ ವ್ಯಕ್ತಿಗಳು ಶಿಬಿರದಲ್ಲಿ ಭಾಗವಹಿಸಿರುವವರಿಗೆ ಮಾಹಿತಿ ನೀಡಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ರೋವರ್ ಸ್ಕೌಟ್ ಲೀಡರ್ / ರೇಜಂರ್ ಲೀಡರ್‌ರವರೊಂದಿಗೆ ಮುಕ್ತವಾಗಿ ಚರ್ಚಿಸುತ್ತಾ ಉನ್ನತ ಶಿಕ್ಷಣ ಸಚಿವರಾಗಿದ್ದ ದಿವಂಗತ ಶ್ರೀ ವಿ.ಎಸ್. ಆಚಾರ್ಯರವರು ರೋವರ್/ ರೇಂಜರ ಘಟಕಗಳನ್ನು ಸ್ಥಾಪಿಸಲು ಅನುಮತಿ ನೀಡಿ, ಚಳುವಳಿಯ ಬೆಳವಣಿಗೆಗೆ ಕಾರಣರಾಗಿದ್ದಾರೆ ಎಂದರು. 8 ಜಿಲ್ಲೆಗಳಿಂದ 117 ಪ್ರಾಂಶುಪಾಲರು, ರೋವರ್ ಸ್ಕೌಟ್ ಲೀಡರ್ / ರೇಜಂರ್ ಲೀಡರ್ ಭಾಗವಹಿಸಿದ್ದರು.

**ಮೈಸೂರು ವಿಭಾಗ:** ಮಾರ್ಚ್ 01ರಂದು ಜಯಚಾಮರಾಜೇಂದ್ರ ಸ್ಕೌಟ್ ಭವನದಲ್ಲಿ ಮಾಹಿತಿ ಶಿಬಿರವನ್ನು ಶ್ರೀ ಕೆ. ಗಂಗಪ್ಪ ಗೌಡ ರಾಜ್ಯ ಕಾರ್ಯದರ್ಶಿ ಇವರು ಸಸಿಗೆ ನೀರು ಹಾಕುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿ ಸ್ಕೌಟಿಂಗ್ / ಗೈಡಿಂಗ್ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಿದರು. ನಂತರ ನಡೆದ ನೇರ ಸಂವಾದದಲ್ಲಿ ಸ್ಕೌಟಿಂಗ್ / ಗೈಡಿಂಗ್ ಬಗ್ಗೆ ಕುರಿತು, ವಿಚಾರ ಮತ್ತು ಅಭಿಪ್ರಾಯಗಳ ಬಗ್ಗೆ ಸಂಪೂರ್ಣ ಮಾಹಿತಿ ನೀಡಿದರು. 4 ಜಿಲ್ಲೆಗಳಿಂದ 62 ಪ್ರಾಂಶುಪಾಲರು, ರೋವರ್ ಸ್ಕೌಟ್ ಲೀಡರ್ / ರೇಜಂರ್ ಲೀಡರ್ ಭಾಗವಹಿಸಿದ್ದರು.





**ಚಿತ್ರದುರ್ಗ ವಿಭಾಗ:** ಮಾರ್ಚ್ 07ರಂದು ಕ್ರೀಡಾ ಸಭಾಂಗಣ ಚಿತ್ರದುರ್ಗದಲ್ಲಿ ನಡೆದ ಮಾಹಿತಿ ಶಿಬಿರವನ್ನು ಪ್ರೊ. ಎ.ಎಸ್. ಚಂದ್ರಶೇಖರ್, ನಿವೃತ್ತ ಪ್ರಾಂಶುಪಾಲರು, ಮಾಜಿ ಜಿಲ್ಲಾ ಆಯುಕ್ತರು(ಸ್ಕೌ) ಇವರು ಸಸಿಗೆ ನೀರು ಹಾಕುವುದರ ಮೂಲಕ ಉದ್ಘಾಟಿಸಿ ಸ್ಕೌಟಿಂಗ್ / ಗೈಡಿಂಗ್ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಿದರು. ನಂತರ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ.ರೇವಣಸಿದ್ದಪ್ಪ ರವರು ಮಾತನಾಡಿ ಎಲ್ಲಾ ವಿಭಾಗದಲ್ಲೂ

ಈ ಸಮಾವೇಶ ನಡೆಯಲು ಕಾರಣರಾದ ರಾಜ್ಯ ಮುಖ್ಯ ಆಯುಕ್ತರನ್ನು ಸ್ಮರಿಸುತ್ತಾ ರೋವರ್ಸ್ / ರೇಜಂರ್ಸ್ ಸರ್ವತೋಮುಖ ಬೆಳವಣಿಗೆಗೆ ಸ್ಕೌಟಿಂಗ್ / ಗೈಡಿಂಗ್‌ನಿಂದ ಮಾತ್ರ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. 4 ಜಿಲ್ಲೆಗಳಿಂದ 49 ಪ್ರಾಂಶುಪಾಲರು, ರೋವರ್ ಸ್ಕೌಟ್ ಲೀಡರ್ / ರೇಜಂರ್ ಲೀಡರ್ ಭಾಗವಹಿಸಿದ್ದರು.



**ಕಲಬುರಗಿ ವಿಭಾಗ:** ಮಾರ್ಚ್ 12ರಂದು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ನಡೆದ ಮಾಹಿತಿ ಶಿಬಿರವನ್ನು ಪ್ರೊ. ಎಸ್.ಆರ್. ನಿರಂಜನ್, ಕುಲಪತಿಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ ಇವರು ಸಸಿಗೆ ನೀರು ಹಾಕುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಾ ಮನುಷ್ಯನ ವಿಕಾಸವಾಗಬೇಕಾದರೆ ಶಿಸ್ತು ಅತೀ ಮುಖ್ಯ, ಪ್ರಾಥಮಿಕ ಹಂತದಲ್ಲಿ ತರಬೇತಿ ನೀಡಿ ಶಿಸ್ತುಬದ್ಧರಾಗಿ ಬೆಳೆಸುವ ನಿಟ್ಟಿನಲ್ಲಿ ರೋವರ್ ಸ್ಕೌಟ್ ಲೀಡರ್ / ರೇಜಂರ್ ಲೀಡರ್‌ಗಳು ಹೆಚ್ಚಿನ ಜವಬ್ದಾರಿಯನ್ನು ತೆಗೆದುಕೊಳ್ಳುವುದು ಅವಶ್ಯವೆಂದು ತಿಳಿದರು.

ಡಾ. ಎಚ್.ವೈ. ಶ್ರೀಶಕುಮಾರ್, ಜಂಟಿನಿರ್ದೇಶಕರು, ಕಾಲೇಜು ಶಿಕ್ಷಣ ಪ್ರಾದೇಶಿಕ ಕಛೇರಿ, ಕಲಬುರಗಿ ಇವರು ಮಾತನಾಡಿ ಮಕ್ಕಳಲ್ಲಿ ನಾನು ಎನ್ನುವ (ಅಹಂ) ಸ್ವಭಾವ, ಕೀಳರಿಮೆ ಹೋಗಬೇಕಾದರೆ ಸ್ಕೌಟಿಂಗ್/ ಗೈಡಿಂಗ್ ತರಬೇತಿ ಅತೀ ಮುಖ್ಯ ಎಂದರು.

ಶ್ರೀ ಪಾಸೋಡಿ, ಸಂಯೋಜಕರು, ಕಲಬುರಗಿ ವಿಶ್ವವಿದ್ಯಾಲಯ, ಇವರು ಮಾತನಾಡಿ ಪ್ರತಿ ಕಾಲೇಜುಗಳಲ್ಲಿಯೂ ರೋವರ್/ ರೇಜಂರ್ ತಂಡ ಕಡ್ಡಾಯವಾಗಿ ತೆರೆದು, ಪರಿಣಾಮಕಾರಿಯಾಗಿ ತರಬೇತಿ ನೀಡಲು ಮನವಿ ಮಾಡಿದರು. ಶಿಬಿರದಲ್ಲಿ ವಿವಿಧ ಜಿಲ್ಲೆಗಳಿಂದ 24 ಪ್ರಾಂಶುಪಾಲರುಗಳು, 32 ರೋವರ್ ಸ್ಕೌಟ್ ಲೀಡರ್, 13 ರೇಂಜರ್ ಲೀಡರ್ಸ್‌ಗಳು, ಒಟ್ಟು 69 ಸಂಖ್ಯೆಯಲ್ಲಿ ಭಾಗವಹಿಸಿದ್ದರು.

ಮೇಲ್ಕಂಡ ಎಲ್ಲಾ ಶಿಬಿರಗಳಲ್ಲಿ ರಾಜ್ಯ ಸಂಸ್ಥೆಯಿಂದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಕೆ. ಗಂಗಪ್ಪ ಗೌಡ, ರಾಜ್ಯ ಕಾರ್ಯದರ್ಶಿ, ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ), ಶ್ರೀಮತಿ ಬಿ.ವಿ. ರಾಮಲತಾ ಜಂ.ರಾ.ಕಾ (ಗೈ), ಪ್ರೊ. ಎ.ಎಸ್. ಚಂದ್ರಶೇಖರ್, ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌ), ಶ್ರೀ ಎಲ್.ಟಿ. ಲೋಕೇಶ್, ಸ.ಕಾ., ಶ್ರೀ ಎಂ. ಪ್ರಭಾಕರ್ ಭಟ್, ರಾ.ಸಂ.ಆ (ಸ್ಕೌ), ಶ್ರೀಮತಿ ಮಂಜುಳ ಸಿ. ರಾ.ಸಂ.ಆ (ಗೈ), ಶ್ರೀ ಎ.ಎಂ. ಶಂಕರ್, ರಾ.ತ.ಆ (ಸ್ಕೌ), ಶ್ರೀಮತಿ ಶಾಮಲ. ಕೆ. ವಿ, ರಾ.ತ.ಆ (ಗೈ), ಶ್ರೀಮತಿ ಆಜಿಜಾ ಸುಲ್ತಾನ, ಎಲ್.ಟಿ. (ಗೈ), ಶ್ರೀಮತಿ ಶುಭ ವಿಶ್ವನಾಥ್, ಶ್ರೀ ಗಣಪತಿ, ಎ.ಎಲ್.ಟಿ (ರೋ), ಶ್ರೀಮತಿ ಅರುಣಮಾಲ, ಎಲ್.ಟಿ. (ಗೈ), ಶ್ರೀಮತಿ ಶುಭಾ ಎಸ್., ಎಲ್.ಟಿ. (ಆರ್), ಶ್ರೀ ಸಂತೋಷ್ ಹುಗ್ಗಿ, ರೋವರ್ ಸ್ಕೌಟ್ ಲೀಡರ್ ಭಾಗವಹಿಸಿದ್ದರು.

## ಹುತಾತ್ಮರಿಗಾಗಿ

**ಶ್ರೀ ಬದ್ರಿನಾಥ್**
15ನೇ ಕಂಠೀರವ ಸ್ಕೌಟ್ ಗ್ರೂಪ್
ಚಾಮರಾಜಪೇಟೆ, ಬೆಂಗಳೂರು

ಹೇ.. ಭಾರತ ದೇಶದ ಜನರೇ...
ಕಣ್ ನೆನೆಯಲಿ ಹುತಾತ್ಮರಿಗಾಗಿ
ಅವರೊಡ್ಡಿದ ಎದೆಯೇ ಹಿಮಾಲಯ
ಅವರು ಸುರಿಸಿದ ರಕ್ತವೇ ಗಂಗೆ...!

ಅವರಾರೆಂದರಿತಿರಿ ನೀವು
ನಮ್ಮಂತೆಯೇ ಮಕ್ಕಳು ಭಾರತಕೆ
ತಾಯ್ನಾಡಿಗೆ ಪ್ರಾಣವನಿತ್ತಾ....
ಅವರು ಬಂಧುಗಳ್ ನಮಗೆ ನಿಮಗೆ....!

ಅವರು ದಕ್ಷಿಣದವರೇನಲ್ಲ
ಪಶ್ಚಿಮಕೆ ಸೇರ್ದವರಲ್ಲ
ಪೂರ್ವದಲೇ ನೆಲ ಕಸಿದಿದ್ದ...
ನಮ್ಮ ಶತ್ರುವಿಗುತ್ತರ ಅವರು...!

ಅವರಾಗದೆ ಹಿಂದೂ ಕ್ರೈಸ್ತ
ಇಸ್ಲಾಮಿ ಬೌದ್ಧ ಸಿಖ್ಖ
ಉಳಿಸಲು ತಮ್ಮಯ ತವರು....!
ಅವರಾದರು ಭಾರತದವರು

ಅವರಿತ್ತಿಹ ಬಳುವಳಿಯನ್ನು
ಅವರಾತ್ಮವು ಸುಖಿಸುವ ಹಾಗೆ
ನಮ್ಮ ಸಂಸ್ಕೃತಿಯ ಉಳಿಸಿ
ಉನ್ನತಿಯನು ಗಳಿಸೋಣ ನಾವು..!



# ಕರ್ನಾಟಕ ದರ್ಶನ

ಕು॥ ಸವಿತಾ ಸನದಮನಿ
5ನೇ ತರಗತಿ ಸ.ಕ.ಹಿ.ಪ್ರಾ, ಶಾಲೆ
ಚಾದನಹೊಸೂರ, ಬೆಳಗಾವಿ ತಾ॥ & ಜಿಲ್ಲೆ.

ಭಾರತ್ ಸ್ಕೌಟ್ಸ್ ಗೈಡ್ಸ್ ಇಲಾಖಾ ಆಶ್ರಯದಲ್ಲಿ
ಮಕ್ಕಳ ಕರ್ನಾಟಕ ದರ್ಶನದಲ್ಲಿ
ಹೊರಟೆವು 5 ಬಸ್‌ಗಳಲ್ಲಿ
ಧಾರವಾಡ ವಿಜ್ಞಾನ ಕೇಂದ್ರದಲ್ಲಿ ಅರಿತೆವು ಹಲವಾರು
ವಿಷಯಗಳನಲ್ಲಿ

ಮುಂದಿನ ಪಯಣ ಇಂದ್ರಗಿರಿ ಚಂದ್ರಗಿರಿಯಲ್ಲಿ
ತಲುಪಿದೆವು ನಸುಕಲಿ ಶ್ರವಣ ಬೆಳಗೊಳದಲ್ಲಿ
ಏರಿದೆವು ಬೆಟ್ಟ ಬಾಹುಬಲಿ ಪಾದದಬಳಿ
ದರ್ಶನ ಪಡೆದೆವು ಇಳಿದೆವು ತಾಟಿನ ಬಳಿ
ಊಟವ ಮುಗಿಸಿ ಬೇಲೂರು ಕೇಶವನಬಳಿ

ಮುಂಜಾನೆ ಪಡೆದೆವು ಚಾಂಮುಂಡಿ ದರ್ಶನ
ಅಲ್ಲಿಂದ ಕಂಡೆವು ಪ್ರಾಣಿ ದರ್ಶನ
ಅಂದದ ಕುಸುರಿನ ಚಂದದ ಆಮನೆ
ಅದುವೆ ಸುಂದರ ಮಹರಾಜರ ಅರಮನೆ

ಅಲ್ಲಿರುವುದು ಸ್ವರ್ಣದ ಸಿಂಹಾಸನ
ರಾಜರು ಆಳಿದ ಕೀರ್ತಿಯ ಮನೆತನ
ಅರಿತೆವು ಸಕಲ ವೈಭವ ದರ್ಶನ
ಬಹಳ ಆಸಕ್ತಿಯ ಶೈಲಿಯ ವಿನೂತನ

ಮನ ತಣಿಸುವ ಬೃಂದಾವನ ತೋಟ
ವಿಶ್ವೇಶ್ವರಯ್ಯನವರ ಕೈಚಳಕದ ನೋಟ
ಕನ್ನಂಬಾಡಿಯ ತಂಪಿನ ಸೆರಗು
ತಣಿಸೆರು ತಾಯಿಯ ದುಃಖದ ಕೊರಗು

ಮುಂದೆ ಕೊಡೆವು ಸರ್ವ ಅಂತರ್ಯಾಮಿ
ಅವರೆ ಶ್ರೀರಂಗವಾಥಸ್ವಾಮಿ
ಬಳಿಕ ಕಂಡೆವು ಟಿಪ್ಪುವಿನ ಸಮಾಧಿ ಸ್ಥಳ
ಮಿಡಿಯಿತು ಎಲ್ಲರ ಮನದ ಅಂತರಾಳ

ಮುಂದಕೆ ಹೊರಟೆವು ಧರ್ಮಸ್ಥಳದತ್ತ
ಎಲ್ಲರ ವಿತ್ತ ದೇವರ ದರ್ಶನದತ್ತ
ಧೀರ್ಘ ಸಮಯದಿ ಮೊರೆಯಿತು ದರ್ಶನ
ಪಡೆದೆವು ದೇವರ ವರಪ್ರಸಾದವನ್ನ

ನಡೆಯಿತು ಭಾಷಣ ಹಾಡು ಕುಣಿತ
ಜೊತೆಯಲ್ಲಿ ಚಿಣ್ಣರ ವರದಿ ಲಿಖಿತ
ಎಲ್ಲವ ಮುಗಿಸಿ ಹೊರಟೆವು ಪಯಣ
ಮುಗಿಯಿತು ನಾಲ್ಕು ದಿನದ ಪ್ರಯಾಣ

ಒಬ್ಬರಿಗೊಬ್ಬರು ವಿದಾಯ ಹೇಳುತ್ತಾ
ಮರೆಯದ ನೋಟವ ಮನದಲಿ ನೆನೆಯುತ
ಹೊರಟೆವು ನಮ್ಮ ಮನೆಗಳತ್ತ
ಎಲ್ಲರೂ ಭರವಾದ ಹೆಜ್ಜೆಗಳಿಡುತ್ತಾ
ಮುಗಿಯದ ಮರೆಯದ ಸುಂದರ ದರ್ಶನ



# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಫೆಬ್ರವರಿ 7 ರಿಂದ 8ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬಳ್ಳಾರಿ ಜಿಲ್ಲಾ ಮಟ್ಟದ ಜಿಲ್ಲಾ ದರ್ಶನ ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಆಯುಕ್ತರಾದ ಶ್ರೀ ಕೆ. ವೀರೇಶ್ ಕುಪ್ಪಗಲ್, ಜಿಲ್ಲಾ ಕಾರ್ಯದರ್ಶಿ ಶ್ರೀ ವಿಜಯಸಿಂಹ, ಜಿಲ್ಲಾ ಖಜಾಂಚಿ ಶ್ರೀಮತಿ ಜಯಶ್ರೀ ಜೋಷಿ ಇವರುಗಳು ಉದ್ಘಾಟನಾ ಕಾರ್ಯಕ್ರಮವನ್ನು ನೆರವೇರಿಸಿದರು.

ಜಿಲ್ಲಾ ದರ್ಶನ ಕಾರ್ಯಕ್ರಮದಲ್ಲಿ ಬಳ್ಳಾರಿ ಕಛೇರಿ, ನಗರದ ದುರ್ಗಮ್ಮ ಗುಡಿ, ಡಾ॥ ರಾಜ್‌ಕುಮಾರ್ ಪಾರ್ಕ್, ವಿದ್ಯಾನಗರ ಚರ್ಚ್, ಸಂಡೂರಿನ ಹಿರಿಶಂಕರ, ಕುಮಾರಸ್ವಾಮಿ ದೇವಸ್ಥಾನ, ಟಿ.ಬಿ.ಡ್ಯಾಂ ಪಾರ್ಕ್, ಹುಲಿಗಿ ದೇವಸ್ಥಾನ, ಹಂಪಿ ಸುತ್ತಮುತ್ತಲಿನ ದೇವಸ್ಥಾನಗಳ ವೀಕ್ಷಣೆ ಮಾಡಿ ಮರಳಿ ಬಳ್ಳಾರಿಗೆ ಬರಲಾಯಿತು.



* ಫೆಬ್ರವರಿ 22 ರಂದು ಬಳ್ಳಾರಿ ಸ್ಥಳೀಯ ಸಂಸ್ಥೆ ವತಿಯಿಂದ ಡಾ. ರಾಜ್‌ಕುಮಾರ್ (ಅನಂತಪುರ) ರಸ್ತೆಯುಲ್ಲಿರುವ ಮಾಜಿ ಪುರಸಭೆ ಪ್ರೌಢಶಾಲಾ ಆವರಣದಲ್ಲಿ ಬಿ.ಪಿ.ಯವರ ದಿನಾಚರಣೆ ಹಾಗೂ ತಾಲೂಕ ಮೇಳ ಹಮ್ಮಿಕೊಳ್ಳಲಾಗಿತ್ತು.



ಈ ಮೇಳದಲ್ಲಿ ಸುಮಾರು 350 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಮೇಳದ ನಾಯಕರಾಗಿ ಶ್ರೀ ಧರ್ಮಣ್ಣ ಮತ್ತು ನಾಯಕಿಯಾಗಿ ಶ್ರೀಮತಿ ಸುನಿತಾ ರವರು ಕಾರ್ಯನಿರ್ವಹಿಸಿದರು. ಬೆಳಿಗ್ಗೆ 8 ಗಂಟೆಗೆ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಸೀರಾಜ್ರರವರು ಬೇಡನ್ ಪೊವೆಲ್ ರವರ ಭಾವಚಿತ್ರಕ್ಕೆ



ಮಾಲಾರ್ಪಣೆ ಮಾಡಿ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ್ದರು. ಉದ್ಘಾಟನಾ ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ವಿಜಯಸಿಂಹ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಮಲ್ಲೇಶ್ವರ ಜೂಜಾರೆ, ತಾಲೂಕ ಕಾರ್ಯದರ್ಶಿಗಳಾದ ಶ್ರೀ ಚಂದ್ರಯ್ಯ ಹಿರೇಮಠದ್ ಸಂಸ್ಥೆಯ ಜಿಲ್ಲಾ ಯುವ ಪ್ರತಿನಿಧಿ ಶ್ರೀ ಚಂದ್ರಶೇಖರ ರೆಡ್ಡಿ. ಜಿ. (ಆರ್.ಎಸ್.ಎಲ್.) ಹಾಗೂ ಇತರರು ಭಾಗವಹಿಸಿದ್ದರು.

ಶ್ರೀ ನಾಗರಾಜ್ (ಡಿ.ಓ.ಸಿ.) ಸ್ವಾಗತ ಕೋರಿದರು, ವಂದನಾರ್ಪಣೆಯನ್ನು ಶ್ರೀ ರತ್ನಾನಾಯಕ್ ಕೋರಿದರು. ನಂತರ ಧ್ವಜಾರೋಹಣ, ಜಾಥಾ ಶಾಲಾ ಆವರಣದಲ್ಲಿ ಕೋರ್ಟ್ ರಸ್ತೆ ರಾಯಲ್ ಸರ್ಕಲ್ ಮೂಲಕ ಪೊಲೀಸ್ ಅಧಿಕಾರಿಗಳ ಬಂದೋಬಸ್ತಿನ ನಡುವೆ ನಡೆಯಿತು. ಜಾಥಾದ ನಂತರ ಮಕ್ಕಳಿಗೆ ತಂಪು ಪಾನೀಯ ನೀಡಲಾಯಿತು.

ಸ್ಕಿಲೋರಾಮ, ಅಡುಗೆ, ಚಿತ್ರಕಲೆ, ರಸಪ್ರಶ್ನೆ, ದೇಶಭಕ್ತಿಗೀತೆಗಳು, ಪೇಪರ್ ಕಟಿಂಗ್, ಕ್ಲೇ ಮಾಡಲಿಂಗ್ ಮುಂತಾದ ಸ್ಪರ್ಧೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ ಫೆಲೋಶಿಪ್ ಸಂಸ್ಥೆ ವತಿಯಿಂದ 5 ಆಟಗಳನ್ನು ನಡೆಸಿ ವಿಜೇತರಿಗೆ ಬಹುಮಾನವನ್ನು ರಾಜ್ಯ ಸಂಸ್ಥೆ ಸಹಾಯಕ ರಾಜ್ಯ ಆಯುಕ್ತರಾದ ಶ್ರೀ ಶಕೀಬ್ ವಿತರಿಸಿದರು. ಊಟದ ನಂತರ ಜನಪದ ನೃತ್ಯ ಸ್ಪರ್ಧೆಯ ಹಾಗೂ ಸಮಾರೋಪ ಸಮಾರಂಭವನ್ನು ನಡೆಸಿ ಕಾರ್ಯಕ್ರಮವನ್ನು ಮುಕ್ತಾಯಮಾಡಲಾಯಿತು. ಈ ಕಾರ್ಯಕ್ರಮದ ಸಂಪೂರ್ಣ ನಿರ್ವಹಣೆಯನ್ನು ಶ್ರೀಮತಿ ಮಲ್ಲೇಶ್ವರಿ ಜುಜಾರೆನಿರ್ವಹಿಸಿದರು.

> **"ನಿನ್ನನ್ನು ನೀನು ಕಾಣಲು ಇರುವ ಅತ್ಯುತ್ತಮ ಮಾರ್ಗವೆಂದರೆ ನೀನು ಇತರರ ಸೇವೆಯಲ್ಲಿಯೇ ಕಳೆದುಹೋಗುವುದು."**
>
> – ಮಹಾತ್ಮ ಗಾಂಧಿ

## ಬೆಳಗಾವಿ

ಫೆಬ್ರವರಿ 21 ಸ್ಥಳೀಯ ಸಂಸ್ಥೆ ಚಿಕ್ಕೋಡಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಚಿಕ್ಕೋಡಿ ಇವರ ಸಂಯುಕ್ತಾಶ್ರಯದಲ್ಲಿ 2018-19 ನೇ ಸಾಲಿನ ಸ್ಕೌಟ್-ಗೈಡ್ ರ್‍ಯಾಲಿ ಶಾಸಕರ ಮಾದರಿ ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಜರುಗಿತು.

ಉದ್ಘಾಟನಾ ಕಾರ್ಯಕ್ರಮದಲ್ಲಿ ತಹಶೀಲ್ದಾರ ಶ್ರೀ ಸಂತೋಷ ಕುಮಾರ ಬಿರಾದಾರ, ಕ್ಷೇತ್ರ ಶಿಕ್ಷಣಾಧಿಕಾರಿ ಗಳಾದ ಶ್ರೀ ಶ್ರೀಪತಿ ಭಟ್ಟ, ನೌಕರರ ಸಂಘದ ಅಧ್ಯಕ್ಷರಾದ ಶ್ರೀ ಎಸ್.ಎನ್. ಬೆಳಗಾವಿ ಪ್ರಾ.ಶ.ಶಿ. ಸಂಘದ ಅಧ್ಯಕ್ಷರಾದ ಶ್ರಿ ಸುನೀಲ ಖಡ್ಡ, ಡಯಟ್ ಪ್ರಾಂಶುಪಾಲರಾದ ಶ್ರೀ ಮೋಹನ್ ಪಿ. ಜೀರಗಿಹಾಳ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಂ.ಕೆ. ಪಾರ್ಥನಹಳ್ಳಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಡಿ.ಬಿ. ಅತ್ತಾರ. ಕಾರ್ಯದರ್ಶಿ ಶ್ರೀ ಎನ್.ಜಿ. ಪಾಟೀಲ ಉಪಸ್ಥಿತರಿದ್ದರು. ಒಟ್ಟು 900 ಸ್ಕೌಟ್-ಗೈಡ್‌ಗಳು, 30 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಶ್ರೀ ಜಿ.ವಿ. ಪಟ್ಟಣಶೆಟ್ಟಿ ನಿರೂಪಿಸಿದರು. ಶ್ರೀ ಎಸ್.ಎನ್. ತೆಗ್ಗಳ್ಳಿ ವಂದಿಸಿದರು.

ನಂತರ ನಗರದ ಪ್ರಮುಖ ಬೀದಿಗಳಲ್ಲಿ ಸ್ಕೌಟ್-ಗೈಡ್‌ಗಳ ಪಥಸಂಚಲನ ನಡೆಯಿತು. ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.

* ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ರಾಮದುರ್ಗ ಮತ್ತು ಪ್ರಿಯದರ್ಶಿನಿ ಕ.ಹಿ.ಪ್ರಾ. ಶಾಲೆ, ಕಟಕೋಳ ಇವರ ಸಹಯೋಗದಲ್ಲಿ 2018-19 ನೇ ಸಾಲಿನ ಸ್ಕೌಟ್-ಗೈಡ್ ಮಕ್ಕಳ ರ್‍ಯಾಲಿಯು ಜರುಗಿತು.

ಪ್ರಿಯದರ್ಶಿನಿ ಶಾಲೆಯ ಆಡಳಿತ ಮಂಡಳಿಯ ಅಧ್ಯಕ್ಷರು ಹಾಗೂ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಪಿ.ಡಿ. ಕಾಲವಾಡ ಇವರುಗಳು ಹಸಿರು ನಿಶಾನೆ ತೋರಿಸುವುದರ ಮೂಲಕ ರ್‍ಯಾಲಿಗೆ ಚಾಲನೆ ನೀಡಿದರು.

ವೇದಿಕೆಯ ದಿವ್ಯ ಸಾನಿಧ್ಯವನ್ನು ಶ್ರೀ ವೀರಭದ್ರ ಶಿವಯೋಗಿ ಶಿವಾಚಾರ್ಯ ಮಹಾಸ್ವಾಮಿಗಳು ವಹಿಸಿದ್ದರು. ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವ್ಹಿ.ಎನ್. ಗೋಡಖಿಂಡಿ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಆರ್. ಅಲಾಸೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಅತಿಥಿಗಳಾಗಿ ಶ್ರೀ ಟಿ.ಪಿ. ಮನೋಳಿ, ಸದರಿ ಶಾಲೆಯ ಆಡಳಿತ ಮಂಡಳಿ ನಿರ್ದೇಶಕರು ಶ್ರೀ ರಮೇಶ್, ತರಬೇತಿ ಎಸ್.ಡಿ.ಎಂ.ಸಿ. ಅಧ್ಯಕ್ಷರು ಶ್ರೀ ಬಿಜಿ. ಮಾಡಳ್ಳಿ, ಶಿಕ್ಷಣ ಸಂಯೋಜಕರಾದ ಶ್ರೀ ಆರ್.ಪಿ. ಬೆಟಗೇರಿ ನಿವೃತ್ತ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಆರ್.ಎಸ್. ವಾಸನದ, ಎ.ಎಸ್.ಓ.ಸಿ., ಶ್ರೀ ಡಿ.ಬಿ. ಅತ್ತಾರ ಇವರು ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಒಟ್ಟು 800 ಸ್ಕೌಟ್-ಗೈಡ್‌ಗಳು, 25 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಶ್ರೀ ವೈ.ವಿ. ಗೊರವನಕೊಳ್ಳ ನಿರೂಪಿಸಿದರು. ಶ್ರೀ ಪಿ.ಡಿ. ಕಾಲವಾಡ ದೈ.ಶಿ. ಪ. ಸ್ವಾಗತಿಸಿದರು. ಶ್ರೀ ಆರ್.ಎನ್. ತೊಳದೂರ ವಂದಿಸಿದರು.

* ಫೆಬ್ರವರಿ 23 ಮತ್ತು 24 ರಂದು ಅಥಣಿ ತಾಲೂಕಿನ ಕೆ.ಎಲ್.ಇ. ಶ್ರೀಮತಿ ಸಿ.ಬಿ. ರಣಮೋಡೆ ಆಂಗ್ಲ ಮಾಧ್ಯಮ ಶಾಲೆ ಅಥಣಿ ಇಲ್ಲಿ ಸ್ಕೌಟ್-ಗೈಡ್‌ಗಳಿಗೆ ಎರಡು ದಿನಗಳ ಕಾರ್ಯಾಗಾರವನ್ನು ಆಯೋಜಿಸಲಾಗಿತ್ತು.

ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ.ಎಂ. ನೇಮಗೌಡರ ಇವರು ಗಿಡಕ್ಕೆ ನೀರೆರೆಯುವುದರ ಮೂಲಕ ಕಾರ್ಯಾಗಾರಕ್ಕೆ ಚಾಲನೆ ನೀಡಿದರು. ಕಾರ್ಯಕ್ರಮದಲ್ಲಿ ಶಾಲೆಯ ಪ್ರಾಂಶುಪಾರಾದ ಶ್ರೀ ಎಂ.ಎಸ್. ಹಿರೇಮಠ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಸ್.ಎ. ವಾಲಿ, ಶ್ರೀ ಎ.ವೈ ಹೊಬತ್ತಿ ಶ್ರೀ ಎ.ಎಂ. ಡಾಂಗೆ ಶ್ರೀಮತಿ ಬಿ.ಎ ಖೋತ, ಶ್ರೀಮತಿ ರೇಣುಕಾ ಎಸ್.ಎಸ್., ಶ್ರೀಮತಿ ಜಯಶ್ರೀ ಅವಟಿ, ಶ್ರೀಮತಿ ವಿನೂತಾ ಮಾನೆ ಶ್ರೀ ಬಿ.ಆರ್. ಗುರವ ಶ್ರೀ ಮಾರುತಿ ಪವಾರ, ಶ್ರೀ ಸೂರ್ಯಕಾಂತ ಮಗದುಮ ಉಪಸ್ಥಿತರಿದ್ದರು.

ಶಿಬಿರದ ನಾಯಕರಾಗಿ ಶ್ರೀ ಡಿ.ಬಿ. ಅತ್ತಾರ ಎ.ಎಸ್.ಒ.ಸಿ., ಸ್ಕೌಟ್ ವಿಭಾಗ, ಶ್ರೀಮತಿ ಬಿ.ಎ. ಖೋತ, ಗೈಡ್ ವಿಭಾಗದಲ್ಲಿ ಕಾರ್ಯ ನಿರ್ವಹಿಸಿದರು.

* ಫೆಬ್ರವರಿ 27 ರಂದು ಚಿಕ್ಕೋಡಿ ತಾಲ್ಲೂಕಿನ ಕರೋಲಕಿ ಗ್ರಾಮದ ಸರಕಾರಿ ಕನ್ನಡ ಹೆಣ್ಣು ಮಕ್ಕಳ ಶಾಲೆಯಲ್ಲಿ ಗೈಡ್ ದಳದ ಉದ್ಘಾಟನೆ ಮತ್ತು ಬಿ.ಪಿ.ಯವರ 162ನೇ ಜನ್ಮ ದಿನಾಚರಣೆ ಕಾರ್ಯಕ್ರಮವು ಜರುಗಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಗ್ರಾಮ ಪಂಚಾಯತಿ ಅಧ್ಯಕ್ಷರಾದ ಶ್ರೀ ಸಂಜು ಕಾಂಬಳಿ ವಹಿಸಿದ್ದರು.

* ಫೆಬ್ರವರಿ 22 ರಂದು ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯಲ್ಲಿ ಸ್ಕೌಟ್-ಗೈಡ್‌ಗಳು ಬೇಡನ್ ಪೋವೆಲ್ ಹಾಗೂ ಲೇಡಿ ಬೇಡನ್ ಪೋವೆಲ್ ಅವರ



ಜನ್ಮ ದಿನದ ಪ್ರಯುಕ್ತ ಸಂಸ್ಥಾಪಕರ ದಿನಾಚರಣೆ ಆಚರಿಸಿದರು. ಈ ಸಂದರ್ಭದಲ್ಲಿ ಆಯೋಜಿಸಲಾದ ರಕ್ತದಾನ ಶಿಬಿರ ಮತ್ತು ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು.

* ಫೆಬ್ರವರಿ 23 ರಂದು ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯಲ್ಲಿ ಕೆ.ಎಲ್.ಇ. ಸಂಸ್ಥೆಯ ಜವಾಹರಲಾಲ ನೆಹರು ವೈದ್ಯಕೀಯ ಮಹಾವಿದ್ಯಾಲಯ, ಡಾ. ಪ್ರಭಾಕರ ಕೋರೆ ಆಸ್ಪತ್ರೆ ಬೆಳಗಾವಿ ಮತ್ತು ಸ್ಥಳೀಯ ಕೆ.ಎಲ್.ಇ. ಆಸ್ಪತ್ರೆ ಇವುಗಳ ಸಂಯುಕ್ತ ಆಶ್ರಯದಲ್ಲಿ ಆಯೋಜಿಸಲಾಗಿದ್ದ ಬೃಹತ್ ಉಚಿತ ಆರೋಗ್ಯ ತಪಾಸಣಾ ಶಿಬಿರದಲ್ಲಿ ಪಾಲ್ಗೊಂಡ ಸಾವಿರಾರು ರೋಗಿಗಳು ಅದರ ಸದುಪಯೋಗ ಪಡೆದರು.

ಈ ಶಿಬಿರದಲ್ಲಿ ಭಾಗವಹಿಸಿದ ಶಾಲೆಯ ಸ್ಕೌಟ್-ಗೈಡ್ ತಂಡದವರು ಸಾರ್ವಜನಿಕರಿಗೆ ಮತ್ತು ರೋಗಿಗಳಿಗೆ ಸಹಾಯ-ಸಹಕಾರ ನೀಡಿ ಅವರಿಂದ ಮೆಚ್ಚುಗೆಯನ್ನು ಗಳಿಸಿದರು. ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ ಬೆಳಗಾವಿ ಮಾನ್ಯ ಲೋಕಸಭಾ ಸದಸ್ಯರಾದ ಶ್ರೀ ಸುರೇಶ್ ಅಂಗಡಿಯವರು ಸ್ಕೌಟ್ ಮತ್ತು ಗೈಡ್‌ಗಳ ಸೇವಾ ಮನೋಭಾವವನ್ನು ಶ್ಲಾಘಿಸಿದರು.



## ಬೆಂಗಳೂರು ಉತ್ತರ

Sree Ayyappa Education centre (CBSE) Medarahalli; Abbigere Main Road Bengaluru-90 celebrated World Thinking Day on 22-02-2019. All the 9 units of the school cub/Bulbul/Scouts/Guides participated in All Faith Prayer. Principal Smt. Manimegalai wished and blessed the scouts and Guides for their active involvement in the activities.



* ಫೆಬ್ರವರಿ 23 ರಂದು ಡಾ॥ ಕೃಪಾನಂದನ್ ಎ.ಡಿ.ಸಿ (ಎಸ್.) ಮತ್ತು ಸ್ಟ್ರೇಸಿ ಸ್ಮಾರಕ ಶಾಲೆಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ 'ಸ್ಥಾಪಕರ ದಿನಾಚರಣೆ' ಯನ್ನು ಆಚರಿಸಲಾಯಿತು. 150 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಇದರ ಅಂಗವಾಗಿ ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮಗಳನ್ನು ಶ್ರೀಮತಿ ಬಿ. ರೇವತಿ, ಎಲ್.ಟಿ.(ಬು) ನಡೆಸಿಕೊಟ್ಟರು. ಶ್ರೀಮತಿ ರಾಮರತ್ನ, ಶ್ರೀಮತಿ ನಂದಕುಮಾರೀ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

## ಬೆಂಗಳೂರು ಪೂರ್ವ

ಸ್ಕೌಟ್ಸ್-ಗೈಡ್ಸ್ ಮಕ್ಕಳಲ್ಲಿ ಎಂತಹುದೇ ಸಂದರ್ಭವನ್ನು ಎದುರಿಸಲು ಬೇಕಾದ ಮನೋಧೈರ್ಯ ತುಂಬುತ್ತದೆ ಎಂದು ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ವಿಭಾಗದ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕ ಶ್ರೀ ಭಾಸ್ಕರ್ ರಾವ್ ನುಡಿದರು.

ಭಾರತ್ ಸ್ಕೌಟ್ಸ್-ಗೈಡ್ಸ್ ಬೆಂಗಳೂರು ಪೂರ್ವ ಜಿಲ್ಲಾ ಸಂಸ್ಥೆಯ ಜಿಲ್ಲಾ ಮಟ್ಟದ ಪ್ರಥಮ ಸ್ಕೌಟ್-ಗೈಡ್ ಮೇಳ ಹಾಗೂ ಸ್ಕೌಟ್ ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ದಂಪತಿಗಳ ಜನ್ಮದಿನಾಚರಣೆ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.



ಸ್ಕೌಟ್ ಸಂಸ್ಥೆಯ ಮಾಜಿ ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ ಮಾತನಾಡಿ "112 ವರ್ಷಗಳ ಇತಿಹಾಸ ಇರುವ ಸ್ಕೌಟ್ ಗೈಡ್ ಸಂಸ್ಥೆಯು ವಿಶ್ವದಾದ್ಯಂತ ದಿನದಿಂದ ದಿನಕ್ಕೆ ಬೆಳೆಯುತ್ತಿದೆ. ಸಮಾಜಮುಖಿಯಾಗಿ ಹಾಗೂ ಶಿಸ್ತುಬದ್ಧ ಸರಳ ಜೀವನವನ್ನು ನಡೆಸಲು ಬೇಕಾದ ಮೌಲ್ಯಾಧಾರಿತ ಚಟುವಟಿಕೆಗಳು ಈ ಸಂಸ್ಥೆಯಲ್ಲಿ ಕಲಿಯ ಸಿಗುತ್ತವೆ" ಎಂದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ ನೂತನ ಜಿಲ್ಲೆಯ ಸಂಭ್ರಮಾಚರಣೆ ಹಾಗೂ ಪ್ರಥಮ ವರ್ಷದ ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ಮೇಳದಲ್ಲಿ ಸುಮಾರು 2000ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿರುವುದು ಸಂತೋಷದ ವಿಷಯ ಎಂದರು. ಪುರಸಭಾ ಅಧ್ಯಕ್ಷ ಶ್ರೀ ಪಿ. ಶಂಕರ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ತಾಲ್ಲೂಕು ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಮುನಿರತ್ನಮ್ಮ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಸಿ. ರಮೇಶ್, ಜಿಲ್ಲಾ ಸ್ಕೌಟ್ ಆಯುಕ್ತ



ಶ್ರೀ ಎನ್. ಶಂಕರಮೂರ್ತಿ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಎಂ. ವಿಜಯಲಕ್ಷ್ಮೀ, ಕೇಂದ್ರ ಸ್ಥಾನಿಕ ಆಯುಕ್ತ ಶ್ರೀ ಬಿ.ಎಲ್. ಶೇಖರ್, ಪೊಲೀಸ್ ಇಲಾಖೆಯ ಪ್ರೊಬೇಷನರಿ ಡಿ.ವೈ.ಎಸ್.ಪಿ. ಶ್ರೀ ಮನೋಜ್ ಕುಮಾರ್ ಮೊದಲಾದವರು ಉಪಸ್ಥಿತರಿದ್ದರು.

* ಫೆಬ್ರವರಿ 22 ರಂದು ಎಸ್.ಜಿ.ಆರ್. ಪಬ್ಲಿಕ್ ಶಾಲೆಯಲ್ಲಿ ಸ್ಥಳೀಯ ಸಂಸ್ಥೆ ರ್‍ಯಾಲಿ ಹಾಗೂ ಚಿಂತನಾದಿನ ಆಚರಿಸಲಾಯಿತು. ವಿವಿಧ ಶಾಲೆಗಳಿಂದ ಬಂದ 465 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಮಾರುತಿ ವಿದ್ಯಾಲಯದಿಂದ 9 ಬನ್ನಿಗಳು ಭಾಗವಹಿಸಿ, ಎಲ್ಲರ ಮನವನ್ನು ಸೆಳೆದರು. ಪ್ರಾರಂಭದಲ್ಲಿ ಸ್ಕೌಟ್ಸ್ ಮಾಸ್ಟರ್ ಶ್ರೀಯುತ ಸಂಪತ್ ಹಾಗೂ ಶ್ರೀ ಮುರುಗ ರವರ ಸ್ಕೌಟ್ ಧ್ವಜಾರೋಹಣ ನಡೆಸಿಕೊಟ್ಟರು.

ಸಹ ಕಾರ್ಯದರ್ಶಿಗಳಾದ ಶ್ರೀ ನಾಗರಾಜಯ್ಯ ಸರ್ವರನ್ನು ಸ್ವಾಗತಿಸಿದರು. ಕಾಡಗೊಂಡನಹಳ್ಳಿ ಪೋಲೀಸ್ ಸ್ಟೇಷನ್ ಸಂಚಾರಿ ಇನ್ಸ್‌ಪೆಕ್ಟರ್ ಶ್ರೀ ರಾಂ.ಕೆ. ಹನುಮಂತಯ್ಯ ನವರು ರಸ್ತೆ ಸುರಕ್ಷತೆ ಮತ್ತು ಸಂಚಾರಿ ನಿಯಮ ಸುರಕ್ಷತೆಗಳ ಬಗ್ಗೆ ಉಪನ್ಯಾಸ ನೀಡಿದರು. ಶ್ರೀ ಸುಬ್ರಮಣಿ, ಶ್ರೀಪ್ರಕಾಶ್, ಶ್ರೀ ಸಿದ್ದಪ್ಪ ಮತ್ತು ಶ್ರೀ ಹನುಮಂತ ರೆಡ್ಡಿ ಮುಂದಾಳತ್ವದಲ್ಲಿ ರೂಟ್ ಮಾರ್ಚ್ ನಡೆಯಿತು. ಪರಿಸರ ಕಾಳಜಿ, ನೀರು ಸದ್ಬಳಕೆ, ಪ್ಲಾಸ್ಟಿಕ್ ನಿಷೇದ, ಕಡ್ಡಾಯ ಮತದಾನ ಚಲಾವಣೆ, ಬಗ್ಗೆ, ಬಿತ್ತಿ ಪತ್ರಗಳನ್ನು ಹಿಡಿದು ಘೋಷಣೆ ಕೂಗುತ್ತಾ ಜನರಲ್ಲಿ ಜಾಗೃತಿ ಮೂಡಿಸಿದರು. ನಂತರ ಸ್ನೇಕ್ ಮೋಹನ್ ರವರು ರೋಲ್ ಆಫ್ ವೈಲ್ಡ್ ಲೈಫ್ ಮತ್ತು ಹ್ಯೂಮನ್ ಇನ್ ನೇಚರ್ ಬಗ್ಗೆ ಮಕ್ಕಳಿಗೆ ತಿಳಿಸಿದರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಮತಿ ಸರೋಜ ಗಣೇಶ್ ವಹಿಸಿದ್ದರು. ಸಭೆಯಲ್ಲಿ ಉಪಾಧ್ಯಕ್ಷರಾದ ಶ್ರೀಮತಿ ಉಷಾ ಕುಮಾರಿ, ಎ.ಡಿ.ಸಿ. ಗಳಾದ ಶ್ರೀ ಸಂಪತ್ ಕುಮಾರ್ ಮತ್ತು ಶ್ರೀಮತಿ ರಾಜಲಕ್ಷ್ಮೀ, ಲಯನ್ಸ್ ಅಧ್ಯಕ್ಷರಾದ ಶ್ರೀ ಅಂತೋಣಿ ರಾಜ್, ಲಯನ್ ವೈ.ಎಂ. ಪಿಲ್ಲಪ್ಪ ಉಪಸ್ಥಿತರಿದ್ದರು. ವಿಜೇತರಿಗೆ ಪ್ರಶಸ್ತಿ ನೀಡಿ ಗೌರವಿಸಿದರು. ಕೊನೆಯಲ್ಲಿ ಕಾರ್ಯದರ್ಶಿಗಳಾದ ಶ್ರೀ ವರ್ಧಮಾನ ಕಳಸೂರು ಸರ್ವರಿಗೂ ವಂದನೆಗಳನ್ನು ಸಲ್ಲಿಸಿದರು.

## ಬೆಂಗಳೂರು ದಕ್ಷಿಣ

ಫೆಬ್ರವರಿ 23 ರಂದು ಮಹಿಳಾ ಸಮಾಜ ಪ್ರೌಢಶಾಲೆ, ಬಸವನಗುಡಿ ಬೆಂಗಳೂರು ಇಲ್ಲಿ 2018-19 ನೇ ಸಾಲಿನ ಸ್ಕೌಟ್-ಗೈಡ್ ವಾರ್ಷಿಕ ಶಿಬಿರ ಮತ್ತು ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು.

200ಕ್ಕೂ ಹೆಚ್ಚು ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನವನ್ನು ನೀಡಲಾಯಿತು. ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ನಾಗರಾಜ, ಗೈಡ್ ಕ್ಯಾಪ್ಟನ್ಸ್ ಇವರುಗಳಿಗೆ ಶ್ರೀ ಎಂ. ಶ್ರೀನಿವಾಸನ್ 15ನೇ ಕಂಠೀರವ ಸ್ಕೌಟ್ ಟ್ರೂಪ್ ನಾಯಕರು ಮಾರ್ಗದರ್ಶನ ನೀಡುತ್ತಾ ಸಹಕರಿಸುತ್ತಿದ್ದಾರೆ.



ಈ ಸಂದರ್ಭದಲ್ಲಿ ಶ್ರೀಮತಿ ಮಂಜುಳಾ ರಾಜ್ಯ ಸಂಘಟನಾ ಆಯುಕ್ತರು (ಗೈ) ಇವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಇವರು ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಕ್ಕಳಿಗೆ ಬಹುಮಾನ ವಿತರಿಸಿ, ಶಾಲೆಯ ಪ್ರಗತಿ, ಶಿಕ್ಷಕಿಯರ ವಿಶೇಷ ಕೌಶಲ್ಯವನ್ನು ಫಲಿತಾಂಶ ಮಕ್ಕಳಿಗೆ ಬೇಕಾದ ಶಿಸ್ತು, ಸಮಯಪಾಲನೆ, ರಾಷ್ಟ್ರೀಯ-ಅಂತರಾಷ್ಟ್ರೀಯ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಿದರು.

* The Rover Scouts of HAL Rover Crew Celebrated Founders and Thinking day by distributing sweets and fruits to women inmates of Bharathiya Grameena Mahila





Sangha. Sri H.L. Adarsh Kumar, Asst. Rover Leader Co-ordinated the Programme.

* The Cubs,Scouts, Bulbuls, Guides of Walchand Hirachand Open Scout and Guide Group along with Scouts of Shishu Kunja School Celebrated Founders and Thinking Day at HAL Town Ship. Camp fire was organised on this occasion. The cubs, Bulbuls Scouts and Guides gave different Programme. Residents of HAL township also witnessed the Programme.

## ಬೆಂಗಳೂರು ಗ್ರಾಮಾಂತರ

ಫೆಬ್ರವರಿ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಿಂದ ಹೊಸಕೋಟೆ ತಾಲ್ಲೂಕು ಸ.ಹಿ.ಪ್ರಾ. ಶಾಲೆ ಬೋಧನ ಹೊಸಹಳ್ಳಿ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೋವೆಲ್ ರವರ ಜನ್ಮ ದಿನಾಚರಣೆ ಅಂಗವಾಗಿ ಸಂಸ್ಥಾಪಕರ ದಿನ ಹಾಗೂ ಪುಲ್ವಾಮ ಭಯೋತ್ಪಾದಕರ ದಾಳಿಗೆ ಬಲಿಯಾದ ಸೈನಿಕರಿಗೆ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಈ ಸಭೆಗೆ ತಾಲ್ಲೂಕ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀಮತಿ ಗುಲಾಬ್ ಜಾನ್ ಹಾಗೂ ಜಿಲ್ಲಾ ಆಯುಕ್ತರಾದ ಶ್ರೀ ನಾಗರಾಜ್ ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ. ಶ್ರೀನಿವಾಸ್ ಪ್ರಸಾದ್ ಆಗಮಿಸಿದ್ದರು.





* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ, ಚುನಾವಣಾ ಆಯೋಗ, ಜಿಲ್ಲಾಡಳಿತ, ಜಿಲ್ಲಾ ಸ್ವೀಫ್ ಸಮಿತಿ, ಜಿಲ್ಲಾ ಪಂಚಾಯತ್, ಸಾರ್ವಜನಿಕ ಶಿಕ್ಷಣ ಇಲಾಖೆ ಸರ್ಕಾರಿ ಪದವಿ ಕಾಲೇಜು ಹಾಗೂ ದೇವನಹಳ್ಳಿ ತಾಲ್ಲೂಕು ಸ್ಥಳೀಯ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ಮಾರ್ಚ್ 16ರ ಶನಿವಾರ ಬೆಳಿಗ್ಗೆ 11 ಗಂಟೆಗೆ ದೇವನಹಳ್ಳಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಚುನಾವಣೆ ಮಹತ್ವದ ಬಗ್ಗೆ ಮತದಾನ ಜಾಗೃತಿ ಅಭಿಯಾನ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ದೇವನಹಳ್ಳಿ ತಹಸೀಲ್ದಾರ್ ಶ್ರೀ ಮಂಜುನಾಥ್ ರವರು ಮತದಾನ ಪ್ರತಿಜ್ಞಾ ವಿಧಿ ಭೋದಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ ಮಾತನಾಡಿ, ದೇಶ ಮತ್ತು ಪ್ರಜಾಪ್ರಭುತ್ವದ ಉಳಿವಿಗಾಗಿ ಯಾವುದೇ ಆಸೆ ಆಮಿಷ ಒತ್ತಡಗಳಿಗೆ ಒಳಗಾಗದೇ ಎಲ್ಲರೂ ಕಡ್ಡಾಯವಾಗಿ ಮತದಾನ ಮಾಡಬೇಕು ಮತ್ತು ಇತರರು ಮತದಾನ ಮಾಡುವಂತೆ ಪ್ರೇರೇಪಿಸಬೇಕು ಎಂದರು. ಇದೇ ಸಂಧರ್ಭದಲ್ಲಿ ಉಪನ್ಯಾಸಕ ಶ್ರೀ ಅಮೀರ್ ಪಾಷಾ ರವರು ಕಡ್ಡಾಯ ಮತದಾನದ ಬಗ್ಗೆ ಉಪನ್ಯಾಸ ನೀಡಿದರು. ಮತದಾನದ ಮಹತ್ವದ ಬಗ್ಗೆ ಏರ್ಪಡಿಸಿದ್ದ ಚರ್ಚಾಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ವಿತರಿಸಲಾಯಿತು.

ಈ ಸಂದರ್ಭದಲ್ಲಿ ಕಾಲೇಜು ಪ್ರಾಂಶುಪಾಲರಾದ ಶಿವಶಂಕರಯ್ಯ, ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಕಾಲೇಜಿನ ರೋವರ್ ಲೀಡರ್, ರೇಂಜರ್ ಲೀಡರ್, ರೋವರ್-ರೇಂಜರ್‌ಗಳು ಹಾಜರಿದ್ದರು. ಈ ಸಂದರ್ಭದಲ್ಲಿ ತಾಲೂಕು ಕಛೇರಿ ಸಿಬ್ಬಂದಿಗಳಾದ ಶ್ರೀ ಮಂಜುನಾಥ ಮತ್ತು ಶ್ರೀ ನರಸಿಂಹ ಮೂರ್ತಿ ರವರು ಮತದಾನದ ಇವಿಎಂ ಮತ್ತು ವಿವಿಪ್ಯಾಟ್ ಮೂಲಕ ಮತದಾನ ಮಾಡುವ ಬಗ್ಗೆ ಮಾಹಿತಿ ನೀಡಿದರು.



## ಬೀದರ್



ಫೆಬ್ರವರಿ 20 ರಂದು ತಾಲ್ಲೂಕಾ ಮಟ್ಟದ ರ್‍ಯಾಲಿಯನ್ನು ಆಯೋಜಿಸಲಾಗಿದ್ದು, ಈ ರ್‍ಯಾಲಿಯನ್ನು ಗಾಂಧೀ ಚೌಕದಿಂದ ಅಂಬೇಡ್ಕರ್ ವೃತ್ತ ಮುಖಾಂತರ ಹಳೆಯ ತಹಸೀಲದಾರ್ ಕಛೇರಿ ವರೆಗೆ ಪಥ ಸಂಚಲನ ಹಮ್ಮಿಕೊಳ್ಳಲಾಗಿತ್ತು. ಶ್ರೀಮತಿ ಸಾವಿತ್ರಿ ಸಲಗರ ತಹಸೀಲ್ದಾರರು ರ್‍ಯಾಲಿಗೆ ಚಾಲನೆ ನೀಡಿದರು. ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀ ಸಂಜಯ ಕುಮಾರ ಕಾಂಗೆ ಡಾ॥ ಜೈಶನ ಪ್ರಸಾದ, ಶ್ರೀ ಮುಜಾಹಿದ ಪಾಶಾ ಖುರೇಶಿ ಹಾಗೂ ಶ್ರೀ ಬಸವೇಶ್ವರ ಸ್ಕೌಟ್ಸ್-ಗೈಡ್ಸ್ ಮುಕ್ತದಳ ಬಸವಕಲ್ಯಾಣ ಅಧ್ಯಕ್ಷ ಶ್ರೀ ಎಜಾಜ ಪಟೇಲ ಮಾತನಾಡಿದರು. ತಾಲೂಕಿನ 400 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು. ಸ್ಕೌಟ್ಸ್ ಮಾಸ್ಟರ್ ಶ್ರೀಯುತರಾದ ಸಂದೀಪನ ಗಾಯಕವಾಡ, ಶ್ರೀ ದಶವಂತ ಬಂಡೆ, ಶ್ರೀಮತಿ ಸುಜಾರಾಣಿ, ರ್‍ಯಾಲಿಗೆ ನಾಯಕರಾಗಿ ಕಾರ್ಯನಿರ್ವಹಿಸಿದ್ದರು.



## ಚಿಕ್ಕಮಗಳೂರು

ಫೆಬ್ರವರಿ 22 ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀರೂರಿನ ರೋವರ್ಸ್ ಹಾಗೂ ರೇಂಜರ್ಸ್ ಘಟಕದ ವತಿಯಿಂದ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರ ದಿನಾಚರಣೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಐರಿನಡಯಾಸ್‌ರವರ ಅಧ್ಯಕ್ಷತೆಯಲ್ಲಿ ರೇಂಜರ್ಸ್ ಲೀಡರ್ ಶ್ರೀಮತಿ ಪವಿತ್ರ ಕೆ.ಪಿ. ಇವರ ನೇತೃತ್ವದಲ್ಲಿ ಕಾಲೇಜಿನ ಎಲ್ಲಾ ಬೋಧಕ ಹಾಗೂ ಬೋಧಕೇತರ ವರ್ಗದ ಸಮ್ಮುಖದಲ್ಲಿ ಆಚರಿಸಿ, ಸರ್ವಧರ್ಮ ಪ್ರಾರ್ಥನಾ ಕಾರ್ಯಕ್ರಮವನ್ನು ಸಹ ಹಮ್ಮಿಕೊಳ್ಳಲಾಯಿತು.

* ಜನವರಿ 20 ರಂದು ಚಿಕ್ಕಮಗಳೂರಿನ ಕದಿರಿಮಿದಿರಿ ಇನ್ಫೆಂಟ್ ಜೀಸಸ್ ಶಾಲೆಯ ಸ್ಕೌಟ್ಸ್-ಗೈಡ್ಸ್ ತಂಡಗಳ ವತಿಯಿಂದ ಆಲ್ದೂರು ಸಮೀಪದ ಕಲ್ಲು ಗುಡ್ಡೆಯ ಶ್ರೀ ರಂಗನ ಬೆಟ್ಟಕ್ಕೆ ಚಾರಣ ನಡೆಸಲಾಯಿತು. ಶಾಲೆಯ ಪ್ರಾಂಶುಪಾಲರಾದ ವಂ.ಸ್ವಾ. ಆಂಡ್ರ್ಯೂ ಜಯರಾಜ್‌ರವರ ನಾಯಕತ್ವದಲ್ಲಿ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳಮಾರ್ಗದರ್ಶನದಲ್ಲಿ ವನ ವಿದ್ಯಾ ಸಂಕೇತದ ಸೂಚನೆಗಳಿಂದ ಬೆಳಿಗ್ಗೆ 9.00 ಗಂಟೆಗೆ ಆರಂಭವಾದ ಚಾರಣವು ಸಂಜೆ 5.00 ಗಂಟೆಗೆ ಮುಕ್ತಾಯವಾಯಿತು. ಚಾರಣದಲ್ಲಿ ಧ್ವಜಾರೋಹಣಮಾಡಲಾಯಿತು. ಅಭಿನಯ ಗೀತೆಗಳು ಚಾರಣದಲ್ಲಿ ಮಕ್ಕಳಿಗೆ ಉತ್ಸಾಹವನ್ನು ನೀಡಿತ್ತು.





## ಚಾಮರಾಜನಗರ

ಫೆಬ್ರವರಿ 23 ರಿಂದ ರಾಷ್ಟ್ರೀಯ ಉದ್ಯಾನವನ ಬಂಡೀಪುರದ ಅರಣ್ಯ ಪ್ರದೇಶದಲ್ಲಿ ಸಂಭವಿಸಿದ ಅಗ್ನಿ ದುರಂತದಲ್ಲಿ ಸೇವೆ ಸಲ್ಲಿಸಲು ಚಾಮರಾಜನಗರ ಜಿಲ್ಲಾ ಸಂಸ್ಥೆಯ ವತಿಯಿಂದ ಅಲ್ಲಿಯ ಫಾರೆಸ್ಟ್ ಗಾರ್ಡ್‌ಗಳು ಮತ್ತು ವಾಚರ್‌ಗಳ ಜೊತೆಯಲ್ಲಿ ರೋವರ್ ತಂಡವನ್ನು ನಿಯೋಜನೆ ಮಾಡಲಾಗಿತ್ತು. ರಾತ್ರಿ ಅಲ್ಲೇ ತಂಗಿದ್ದು ಬೆಂಕಿ ನಂದಿಸುವ ಕಾರ್ಯಚರಣೆಯಲ್ಲಿ ತೊಡಗಿದರು. ನಂತರ ಕೌಂಟರ್ ಫೈರ್‌ನಲ್ಲಿ ರೋವರ್ಸ್‌ಗಳು ಅರಣ್ಯ ಇಲಾಖೆಯ ಸಿಬ್ಬಂದಿ ವರ್ಗದವರ ಮತ್ತು ಅಗ್ನಿ ಶಾಮಕ ಇಲಾಖೆಯ ಸಿಬ್ಬಂದಿ ವರ್ಗದವರ ಜೊತೆಯಲ್ಲಿ ಸ್ಪ್ರೆಯರ್ ಮೂಲಕ ನೀರನ್ನು ಹಾಯಿಸಿದರು. ರೋವರ್ಸ್‌ಗಳು ಬಂಡೀಪುರದಲ್ಲಿ ಮೂರು ದಿನಗಳ ವರೆಗೆ ಅಲ್ಲಿಯೇ ಇದ್ದು ಅತ್ಯುತ್ತಮ ಸೇವೆ ಸಲ್ಲಿಸಿದರು. ಪ್ರಥಮ ದರ್ಜೆ ಕಾಲೇಜು ಗುಂಡ್ಲುಪೇಟೆ, ಶ್ರೀ ಮುದ್ದಾನೇಶ್ವರ ಪ್ರಥಮ ದರ್ಜೆ ಕಾಲೇಜು ಕಬ್ಬಹಳ್ಳಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಯಳಂದೂರು ಇಲ್ಲಿನ ರೋವರ್ಸ್‌ಗಳು ಭಾಗವಹಿಸಿದ್ದರು. ರೋವರ್ ಸ್ಕೌಟ್ ಲೀಡರ್ ಆದ ಶ್ರೀ ಪ್ರದೀಪ್, ಎಸ್. ರವರು ಈ ತಂಡಕ್ಕೆ ನಾಯಕರಾಗಿದ್ದರು.





## ದಕ್ಷಿಣ ಕನ್ನಡ

ಜನವರಿ 26 ರಿಂದ 28 ರ ವರೆಗೆ ಭಾರತ್ ಸ್ಕೌಟ್ಸ್ – ಗೈಡ್ಸ್ ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಕಬ್–ಬುಲ್‌ಬುಲ್ ಉತ್ಸವ, ಸ್ಕೌಟ್–ಗೈಡ್ ಮೇಳ ಹಾಗೂ ರೋವರ್–ರೇಂಜರ್ ಸಮಾಗಮ, ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ನಡೆಯಿತು. ಮೇಳದ ಉದ್ಘಾಟನೆಯನ್ನು ಶ್ರೀ ವಸಂತ್ ಶೆಟ್ಟಿ, ಆಡಳಿತ ನಿರ್ದೇಶಕರು, ಸಾನಿಧ್ಯ ವಿದ್ಯಾ ಸಂಸ್ಥೆ, ಶಕ್ತಿನಗರ ಇವರು ನೆರವೇರಿಸಿದರು. ಶ್ರೀ ಎಸ್. ನಾರಾಯಣ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ದಿನೇಶ್, ಸಹ ಕಾರ್ಯದರ್ಶಿ ವಂದನಾರ್ಪಣೆ ಗೈದರು. ಶ್ರೀಮತಿ ಲತಿಕಾ ಕಾರ್ಯಕ್ರಮ ನಿರೂಪಿಸಿದರು.

ಈ ಕಾರ್ಯಕ್ರಮದಲ್ಲಿ ಬೆಂಕಿ ಬಳಸದೆ ಅಡುಗೆ ತಯಾರಿ, ಚಿತ್ರಕಲಾ ಸ್ಪರ್ಧೆ, ಗಾಳಿಪಟ ಸ್ಪರ್ಧೆ, ಕರಕುಶಲ ವಸ್ತು ತಯಾರಿ, ಜನಪದ ಗೀತಾ ಸ್ಪರ್ಧೆ ಹಾಗೂ ವಿವಿಧ ಆಟಗಳು ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸಲಾಯಿತು. 2 ದಿನದ ಕಾರ್ಯಕ್ರಮಕ್ಕೆ ಮಂಗಳೂರು ನಗರದ ವಿವಿಧ ಶಾಲೆಗಳಿಂದ 176 ಸ್ಕೌಟ್–ಗೈಡ್‌ಗಳು ಮತ್ತು 24 ಶಿಕ್ಷಕರು ಭಾಗವಹಿಸಿದ್ದರು. ಜನವರಿ 28ರಂದು ಸರ್ವಧರ್ಮ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವನ್ನು ಕೊನೆಗೊಳಿಸಲಾಯಿತು.

* ಫೆಬ್ರವರಿ 9 ರಿಂದ 11 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳದಲ್ಲಿ ಜಿಲ್ಲಾ ಮಟ್ಟದ ರೋವರ್ಸ್–ರೇಂಜರ್ಸ್ ನಿಪುಣ್ ಪ್ರಾವೀಣ್ಯತಾ ಪದಕ ಶಿಬಿರ ನಡೆಯಿತು. ಶಿಬಿರದಲ್ಲಿ ಜಿಲ್ಲೆಯ 49 ರೋವರ್ಸ್, 56 ರೇಂಜರ್ಸ್ ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಪ್ರತಿಮ್ ಕುಮಾರ್ ಎ.ಎಲ್.ಟಿ. (ಆರ್.ಎಸ್.ಎಲ್.) ವಹಿಸಿದ್ದರು. ಶಿಬಿರವನ್ನು ಜಿಲ್ಲಾ ಸಂಘಟಕ ಶ್ರೀ ಭರತ್‌ರಾಜ್ ಕೆ ಸಂಘಟಿಸಿದರು.

* ಫೆಬ್ರವರಿ 10 ರಂದು ಜಿಲ್ಲಾ ತರಬೇತಿ ಕೇಂದ್ರದಲ್ಲಿ ಅಧ್ಯಯನ ವೃತ್ತ ಶಿಬಿರ ನಡೆಸಿ, ಪ್ರಶ್ನಾವಳಿಗೆ ಉತ್ತರ ಬರೆಯುವುದರ ಬಗ್ಗೆ ಮಾಹಿತಿ ನೀಡಲಾಯಿತು. ಶಿಬಿರದ ನಾಯಕತ್ವವನ್ನು ಶ್ರೀಮತಿ ಜಯಶ್ರೀ ಎಲ್.ಟಿ. (ಗೈ) ರವರು ವಹಿಸಿದ್ದರು.

* ಫೆಬ್ರವರಿ 9 ರಿಂದ 18 ರ ವರೆಗೆ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ "ಭಗವಾನ್ ಶ್ರೀ ಬಾಹುಬಲಿ

ಮಹಾಮಸ್ತಕಾಭಿಷೇಕ ಮಹೋತ್ಸವದಲ್ಲಿ ಎಸ್.ಡಿ.ಎಂ. ಪಿ.ಯು ಕಾಲೇಜು ಉಜಿರೆಯ 13 ರೋವರ್ಸ್, 8 ರೇಂಜರ್ಸ್, ಎಸ್.ಡಿ.ಎಂ, ಡಿಗ್ರಿ ಕಾಲೇಜ್ ಉಜಿರೆಯ 5 ರೋವರ್ಸ್, 5 ರೇಂಜರ್ಸ್, ಎಸ್.ಡಿ.ಎಂ. ಐ.ಟಿ.ಐ., ಕಾಲೇಜ್‌ನಿಂದ 53 ರೋವರ್ಸ್ ಒಟ್ಟು 84 ರೋವರ್ಸ್-ರೇಂಜರ್ಸ್‌ಗಳು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿರುತ್ತಾರೆ. ಶಿಬಿರದ ನಾಯಕತ್ವವನ್ನು ರೋವರ್ ಸ್ಕೌಟ್ ಲೀಡರ್ ಶ್ರೀ ಜಾಕೋಬ್, ಶ್ರೀ ಪ್ರಸಾದ್, ರೇಂಜರ್ಸ್ ಲೀಡರ್ ಶ್ರೀಮತಿ ವಸಂತಿ, ಶ್ರೀಮತಿ ಅಂಕಿತಾ ಹಾಗೂ ಸ್ಕೌಟರ್-ಗೈಡರ್‌ಗಳು ಸಹಕರಿಸಿರುತ್ತಾರೆ.

* ಉಳ್ಳಾಲ ಸ್ಥಳೀಯ ಸಂಸ್ಥೆ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಫೆಬ್ರವರಿ 9 ರಂದು ಪ್ರಕೃತಿ ಅಧ್ಯಯನ ಮತ್ತು ಹೊರ ಸಂಚಾರ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶಾಲಾ ಪ್ರಭಾರ ಮುಖ್ಯ ಶಿಕ್ಷಕಿ ಶ್ರೀಮತಿ ಆಯಿಶಾ ಬೀಬಿ ಮತ್ತು ಶಾಲಾಭಿವೃದ್ಧಿ ಸಮಿತಿ ಸದಸ್ಯೆ ಶ್ರೀಮತಿ ಶೀಲಾ ಗಟ್ಟಿ ಜಂಟಿಯಾಗಿ ಉದ್ಘಾಟಿಸಿದರು. ಸ್ಕೌಟರ್ ಶ್ರೀ ಪ್ರದೀಪ್ ಕಾರ್ಯಕ್ರಮ ನಿರ್ವಹಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಅಬ್ದುಲ್ ಮಲಾರ್ ಎಲ್ಲರನ್ನು ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಬಿ. ಕಜೆ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ದಾರಿ ಮಧ್ಯೆ ಮಂಗಳೂರು ಪೇಪರ್ ಮಿಲ್‌ಗೆ ಭೇಟಿ ನೀಡಿ ಪೇಪರ್ ತಯಾರಿಸುವ ತಾಂತ್ರಿಕತೆಯನ್ನು ಅರಿತುಕೊಂಡರು. ಮೀನಾದಿ ಬಳಿಯ ಒಲವಿನ ಹಳ್ಳಿ (ವೃದ್ಧಾಶ್ರಮ)ಗೆ ಭೇಟಿ ನೀಡಿ ವೃದ್ಧರು ಅನಾಥರನ್ನು ಭೇಟಿ ಮಾಡಿ ಕುಶಲೋಪರಿ ನಡೆಸಿ ಅಲ್ಲಿಯ ಕೃಷಿ ದರ್ಶನ ಮಾಡಿದರು.

* ಫೆಬ್ರವರಿ 16 ರಿಂದ 18ರ ವರೆಗೆ ಶ್ರೀ ಗೋಕರ್ಣನಾಥ ಕ್ಷೇತ್ರ ಕುದ್ರೋಳಿ, ಮಂಗಳೂರಿನಲ್ಲಿ ನಡೆಯುತ್ತಿರುವ ಬ್ರಹ್ಮಕಲಶ ಕಾರ್ಯಕ್ರಮದಲ್ಲಿ ವಿವೇಕಾನಂದ ಪ್ರಥಮ ದರ್ಜೆ ಕಾಲೇಜು ಪುತ್ತೂರಿನ 22 ರೋವರ್ಸ್, 44 ರೇಂಜರ್ಸ್‌ಗಳು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. ನಾಯಕತ್ವವನ್ನು ರೇಂಜರ್ಸ್ ಲೀಡರ್ ಕು. ದಿವ್ಯ ಹಾಗೂ ಕು. ದೀಪಿಕಾರವರು ವಹಿಸಿಕೊಂಡಿದ್ದರು.

* ಫೆಬ್ರವರಿ 22 ರಂದು ವಿಶ್ವ ಚಿಂತನ ವಿಶ್ವ ಭ್ರಾತೃತ್ವ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆ ಹಾಗೂ ಶುಭೋದಯದ ಸಹಯೋಗದಲ್ಲಿ ನಡೆಯಿತು. ಈ ಕಾರ್ಯಕ್ರಮದ ಸಭಾ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ




ಡಾ. ಎನ್.ಜಿ. ಮೋಹನ್‌ರವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಶ್ರೀ ವಾಸುದೇವ ಬೋಳೂರು ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಮ್.ಜಿ. ಕಜೆ, ಮ್ಯಾನೇಜರ್ ಶ್ರೀ ಭಾಸ್ಕರ್, ಜಿಲ್ಲಾ ಸಂಘಟಕರು ಶ್ರೀ ಭರತ್ ರಾಜ್ ಕೆ. ಶುಭೋದಯ ಶಾಲಾ ಪ್ರಾಂಶುಪಾಲರು ಶ್ರೀಮತಿ ಜಯಶ್ರೀ ಪೈ, ಶಾಲಾ ಸಂಗೀತ ಶಿಕ್ಷಕರಾದ ಶ್ರೀ ರಾಘವೇಂದ್ರರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ನಂತರ ಯೋಧರಿಗೆ ಶ್ರದ್ಧಾಂಜಲಿ ಸಲ್ಲಿಸಲಾಯಿತು.

ಕಬ್ ಮಾಸ್ಟರ್ ಶ್ರೀಮತಿ ಜಾನೆಟ್ ಸ್ವಾಗತಿಸಿದರು. ಗೈಡ್ ಕು॥ ಅಂಕಿತ್ ಕಾರ್ಯಕ್ರಮವನ್ನು ನಿರೂಪಿಸಿದರು. ಜಿಲ್ಲಾ ಸಂಘಟಕರು, ಶ್ರೀ ಭರತ್‌ರಾಜ್ ಅಭಿನಂದಿಸಿದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಪೂರ್ಣಿಮಾ, ಕು॥ ಚೈತ್ರ ಹಾಗೂ ಪ್ರದೀಪ, ಫ್ಲಾಕ್ ಲೀಡರ್ ಭವ್ಯರವರು ಸಂಪೂರ್ಣ ಸಹಕಾರ ನೀಡಿ ಕಾರ್ಯಕ್ರಮ ಯಶಸ್ಸಿಗೆ ಕಾರಣರಾದರು.

* ಫೆಬ್ರವರಿ 22ರಂದು ಬೇಡನ್ ಪೊವೆಲ್ ಅವರ ಜನ್ಮದಿನದ ಪ್ರಯುಕ್ತ ಚಿಂತನಾ ದಿನವನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ಶಾಲಾ ಮುಖ್ಯ ಗುರುಗಳಾದ ಶ್ರೀಮತಿ ದೇವಕಿ ಎಂ. ಶುಭ ಹಾರೈಸಿದರು. ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಮೊಯಿದಿನ್ ಕುಟ್ಟಿ, ಸದಸ್ಯರಾದ ಶ್ರೀ ಮಹಮ್ಮದ್ ಹಾಗೂ ಶಾಲಾ ಶಿಕ್ಷಕ ವೃಂದದವರು ಉಪಸ್ಥಿತರಿದ್ದರು. ಶಾಲಾ ಎಸ್.ಡಿ.ಎಂ.ಸಿ ಸದಸ್ಯರಾದ ಶ್ರೀ ಮಹಮ್ಮದ್ ಅವರ ಅಧ್ಯಕ್ಷತೆಯಲ್ಲಿ ಗೈಡ್‌ಗಳು ದೀಪ ಬೆಳಗಿಸುವ ಮೂಲಕ ಸಭಾ ಕಾರ್ಯಕ್ರಮವು ಜರುಗಿತು. ವೇದಿಕೆಯಲ್ಲಿ ಶಾಲಾ ಮುಖ್ಯ ಗುರು ಶ್ರೀಮತಿ ದೇವಕಿ ಎಂ. ಹಿರಿಯ ಶಿಕ್ಷಕಿ ಶ್ರೀಮತಿ ಚಂದ್ರಪ್ರಭಾ ಎಸ್. ಹಾಗೂ ಶಾಲಾ ನಾಯಕ ಪ್ರಶಾಂತ ಆಚಾರ್ಯರವರು ವೇದಿಕೆಯಲ್ಲಿ ಉಪಸ್ಥಿತರಿದ್ದು ಶುಭ ಹಾರೈಸಿದರು.

* ಫೆಬ್ರವರಿ 22 ರಂದು ಸಂಸ್ಥಾಪಕರ ಮತ್ತು ಚಿಂತನಾ ದಿನಾಚರಣೆಯನ್ನು ಆಳ್ವಾಸ್‌ನ ಬನ್ನೀಸ್, ಕಬ್ಸ್-ಬುಲ್ ಬುಲ್ಸ್, ಸ್ಕೌಟ್ಸ್-ಗೈಡ್ಸ್ ಹಾಗೆಯೇ ಸವ್ ಸ್ಕೌಟರ್-ಗೈಡರ್‌ಗಳ ಸಮಕ್ಷಮದಲ್ಲಿ ನಡೆಸಲಾಯಿತು. 'ಸರ್ವಧರ್ಮ-ಪ್ರಾರ್ಥನೆ' ನಡೆಸಲಾಯಿತು. ಸ್ಕೌಟ್-ಗೈಡ್‌ಗಳಿಗೆ 'ಪ್ರಬಂಧ ಸ್ಪರ್ಧೆ' ಹಾಗೂ 'ಬೆಂಕಿ ಇಲ್ಲದೆ ಅಡುಗೆ' ಸ್ಪರ್ಧೆ ನಡೆಸಲಾಯಿತು. ಆಳ್ವಾಸ್ ಆಂಗ್ಲ ಮಾಧ್ಯಮ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿರುವ ಶ್ರೀಮತಿ ಕಮಲಾನಂದರವರು 'ನಾಯಕತ್ವ'ದ ಬಗ್ಗೆ ಉಪನ್ಯಾಸ ನೀಡಿದರು. ಕಾರ್ಯಕ್ರಮದಲ್ಲಿ, ಗೈಡರ್ ಶ್ರೀಮತಿ ವೀಣಾ ಸ್ವಾಗತಿಸಿ, ಶ್ರೀಮತಿ ರಜನಿ ವಂದಿಸಿದರು. ಕಾರ್ಯಕ್ರಮ ನಿರೂಪಣೆ ಶ್ರೀಯುತ ಜನಾರ್ಧನ್ ನಡೆಸಿಕೊಟ್ಟರು.

* ಫೆಬ್ರವರಿ 22ರಂದು ಕೆನರಾ ಹೈಸ್ಕೂಲ್ ಸಿ.ಬಿ.ಎಸ್.ಸಿ. ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಂದ ಚಿಂತನಾ ದಿನಾಚರಣೆ ಯನ್ನು ಆಚರಿಸಲಾಯಿತು.ಈ ಕಾರ್ಯಕ್ರಮವು ಸರ್ವಧರ್ಮ ಪ್ರಾರ್ಥನೆಯ ಮೂಲಕ ಪ್ರಾರಂಭಗೊಂಡಿತು. ಮೊದಲಿಗೆ ಪುಲ್ವಾಮದಲ್ಲಿ ಹುತಾತ್ಮರಾದ ವೀರಯೋಧರಿಗೆ ಮೌನ ಪ್ರಾರ್ಥನೆಯ ಮೂಲಕ ನಮನ ಸಲ್ಲಿಸಲಾಯಿತು. ಗೈಡ್ ಕ್ಯಾಪ್ಟನ್ ಶ್ರೀಮತಿ ವಿದ್ಯಾ ಕಾವೇರಿಯವರು ಸ್ಕೌಟಿಂಗ್‌ನ ಬಗ್ಗೆ ಹಾಗೂ ಇದರಲ್ಲಿ ಸಾರ್ಥಕತೆಯನ್ನು ಸಾಧಿಸುವುದರ ಬಗ್ಗೆ ತಿಳಿಸಿಕೊಟ್ಟರು. ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಜೋಯ್ ಜೆ.ರೈ. ರವರು ಕಾರ್ಯಕ್ರಮಕ್ಕೆ ಶುಭ ಹಾರೈಸಿದರು.

ಗೈಡ್ ಕು॥ ಚಿನ್ಮಯಿ ಕಾರ್ಯಕ್ರಮವನ್ನು ನಿರೂಪಿಸಿದರು. ಗೈಡ್ ಕು॥ ಅನಘಾ ಪ್ರಭು ಸ್ವಾಗತಿಸಿದರು. ಸ್ಕೌಟ್ ಶ್ರೀ ಹೆಚ್. ವಾಸುದೇವ ವಂದಿಸಿದರು.




* ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರಾದ ಶ್ರೀ ಬೇಡನ್ ಪೊವೆಲ್‌ರ ಜನ್ಮ ದಿನಚರಣೆಯನ್ನು ಚಿಂತನಾ ದಿನವನ್ನಾಗಿ ಆಚರಿಸುವ ಹಿನ್ನೆಲೆಯಲ್ಲಿ ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆಯ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್‌ಗಳು ಸಾರ್ವಜನಿಕ ಆಸ್ಪತ್ರೆಗೆ ಭೇಟಿ ನೀಡಿ ಆಸ್ಪತ್ರೆಯ ವಿಭಾಗಗಳನ್ನು ಪರಿವೀಕ್ಷಿಸಿ ಮಾಹಿತಿ ಪಡೆದುಕೊಂಡರು. ಹಾಗೆಯೇ ರೋಗಿಗಳ ಕುಶಲೋಪರಿಯನ್ನು ವಿಚಾರಿಸಿದರು.

ನಂತರ ಅಂಚೆಕಛೇರಿಯನ್ನು ಸಂಪರ್ಕಿಸಿ ಪೋಸ್ಟ್ ಮಾಸ್ಟರ್ ಶ್ರೀ ವಿಜಯಲಕ್ಷ್ಮಿಯವರಿಂದ ಅಂಚೆ ಕಛೇರಿಯ ಬಗ್ಗೆ ಮಾಹಿತಿ ಪಡೆದರು.

* ಫೆಬ್ರವರಿ 22 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಡಿಪು, ಇಲ್ಲಿನ ರೇಂಜರ್ಸ್ ಘಟಕದ ವತಿಯಿಂದ ಲಾರ್ಡ್ ಬೇಡನ್ ಪೊವೆಲ್ ಅವರ ಹುಟ್ಟುಹಬ್ಬದ ಪ್ರಯುಕ್ತ ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಪ್ರಾರ್ಥನೆಯೊಂದಿಗೆ ಆರಂಭಿಸಿ, ಬಳಿಕ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ರೇಂಜರ್ಸ್ ಲೀಡರ್ ಶ್ರೀಮತಿ ಶುಭ ಅವರು ರೇಂಜರ್ಸ್‌ನ ನಾಯಕತ್ವ ಗುಣಗಳ ಬಗ್ಗೆ ಮಾಹಿತಿಯನ್ನು ನೀಡಿದರು. ಈ ಸಂದರ್ಭದಲ್ಲಿ ಕಾಶ್ಮೀರದ ಪುಲ್ವಾಮದಲ್ಲಿ ಮಡಿದ 44 ವೀರ ಯೋಧರಿಗೆ ನಮನ ಸಲ್ಲಿಸುವ ಸಲುವಾಗಿ ಮಾನವ ಸರಪಳಿ ನಿರ್ಮಿಸಿ ಕ್ಯಾಂಡಲ್ ಬೆಳಗುವ ಮೂಲಕ ಅವರುಗಳ ಆತ್ಮಕ್ಕೆ ಶಾಂತಿಯ ನಮನಗಳನ್ನು ಸಲ್ಲಿಸಲಾಯಿತು.

* ಫೆಬ್ರವರಿ 22 ರಂದು ಲೇಡಿಹಿಲ್ ವಿದ್ಯಾಸಂಸ್ಥೆಯ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳಿಂದ ಲಾರ್ಡ್ ಬೇಡನ್ ಪೊವೆಲ್ ರವರ ಹಾಗೂ ಲೇಡಿ ಒಲೇವ ಬೇಡನ್ ಪೊವೆಲರವರ ಹುಟ್ಟುಹಬ್ಬವನ್ನು ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಸರ್ವಧರ್ಮ ಪ್ರಾರ್ಥನೆಯ ಮೂಲಕ ಪುಲ್ವಾಮದಲ್ಲಿ ಮಡಿದ ವೀರ ಯೋಧರಿಗೆ ಪುಷ್ಪಾರ್ಚನೆ-ಯೊಂದಿಗೆ ಭಾವಪೂರ್ಣ ಶ್ರದ್ಧಾಂಜಲಿಯನ್ನು



ಅರ್ಪಿಸಲಾಯಿತು. ಶಾಲಾ ಮುಖ್ಯೋಪಾಧ್ಯಾಯರುಗಳಾದ ಕನ್ನಡ ಪ್ರಾಥಮಿಕ ಶಾಲೆ ಭಗಿನಿ ಚೇತನಾ, ಆಂಗ್ಲ ಪ್ರಾಥಮಿಕ ಶಾಲಾ ಉಪ ಮುಖ್ಯೋಪಾಧ್ಯಾಯಿನಿಯಾದ ಭಗಿನಿ ವೈಲೆಟ್ ಇವರು ದೀಪವನ್ನು ಬೆಳಗಿಸಿದರು. ನಮ್ಮ ಸಮಾಜದಲ್ಲಿ ಶಾಂತಿ, ಪ್ರೀತಿ, ಸಮಾಧಾನದಿಂದ ಬಾಳಲು ನೆಲೆಯಾಗಲಿ ಎಂಬ ಬೇಡನ್ ಪೊವೆಲ್‌ರವರ ಮಾತು ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯ ಚಿಲುಮೆ ಉಕ್ಕುವಂತೆ ಮಾಡಿತು.

* ಫೆಬ್ರವರಿ 23 ರಂದು ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರ ಹಾಗೂ ಚಿಂತನಾ ದಿನಾಚರಣೆಯನ್ನು ಸಂತ ಲಾರೆನ್ಸ್ ರ ಆಂಗ್ಲ ಮಾಧ್ಯಮ ಶಾಲೆ, ಬೋಂದೆಲ್‌ನಲ್ಲಿ ಆಚರಿಸಲಾಯಿತು.

ಕಾರ್ಯಕ್ರಮದ ಮೊದಲಿಗೆ ಸ್ಕೌಟ್-ಗೈಡ್ ಪಥಸಂಚಲನ ನಡೆಯಿತು. ಸಂತ ಲಾರೆನ್ಸ್‌ನ ಶಾಲೆಯ ಸಂಚಾಲಕರಾದ ವಂ. ಆ್ಯಂಡ್ರು ಲಿಯೋ ಡಿ'ಸೋಜ ಮತ್ತು ಶಾಲೆಯ ಪ್ರಾಂಶುಪಾಲರಾದ ವಂ. ಕ್ಲಿಪರ್ಡ ಪಿಂಟೋ ಇವರನ್ನು ಶಾಲೆಯ ಸ್ಕೌಟರ್ ಶ್ರೀ ಆ್ಯನ್‌ಸನ್ ಸ್ವಾಗತಿಸಿದರು.

"ಶಿಸ್ತಿನಿಂದ ಜೀವನ, ಸ್ಕೌಟ್ಸ್-ಗೈಡ್ಸ್‌ಗಳಿಂದ ಶಿಸ್ತನ್ನು ನೋಡಿ ಕಲಿಯಬಹುದು ಎಂದು ಶಾಲೆಯ ಸಂಚಾಲಕರಾದ ವಂ. ಆ್ಯಂಡ್ರು ಲಿಯೋ ಡಿ'ಸೋಜ ನುಡಿಮುತ್ತುಗಳನ್ನಾಡಿದರು. ಸ್ಕೌಟ್-ಗೈಡ್ ಶಾಲೆಯಲ್ಲಿ ಹೆಚ್ಚಿನ ವ್ಯವಸ್ಥೆಯನ್ನು ಮಾಡಿಕೊಡುವುದಾಗಿ, ಶಾಲೆಯ ಪ್ರಾಂಶುಪಾಲರಾದ ವಂ. ಕ್ಲಿಫರ್ಡ್ ಪಿಂಟೋರವರು ಭರವಸೆಯನ್ನು ನೀಡಿದರು.

* ಫೆಬ್ರವರಿ 23 ರಂದು ಮಂಗಳೂರಿನ ಇಸ್ಕಾನ್ ಶ್ರೀ ಕೃಷ್ಣ ಬಲರಾಮರ ರಥೋತ್ಸವ ಕಾರ್ಯಕ್ರಮದಲ್ಲಿ ಜಿಲ್ಲೆಯ ಆಳ್ವಾಸ್ ಪ್ರಥಮ ದರ್ಜೆ ಕಾಲೇಜ್, ಮೂಡಬಿದ್ರೆ ಮತ್ತು ಸರಕಾರಿ ಪ್ರಥಮ ದರ್ಜೆ ಕಾಲೇಜ್ ಬಂಟ್ವಾಳ ರೋವರ್ಸ್‌ಗಳು ಸ್ವಯಂಸೇವಕರಾಗಿ ಸೇವೆ ಸಲ್ಲಿಸಿದರು.



## ಧಾರವಾಡ

ಸರಕಾರಿ ಪ್ರ॥ ದ॥ ಕಾಲೇಜು ನವಲಗುಂದ ಸಾವಿತ್ರಿಬಾಯಿ ಫುಲೆ ರೇಂಜರ್ ಘಟಕದ ರೇಂಜರ್‌ಗಳು 2018-2019ನೇ ಸಾಲಿನಲ್ಲಿ ತಾಲ್ಲೂಕು ಮಟ್ಟದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿ ಸ್ವಚ್ಛತೆ ಊಟೋಪಚಾರ ಸಂದರ್ಭದಲ್ಲಿ ಸಹಕರಿಸಿ ಸೇವೆ ಮಾಡಿದರು. ಕಾಲೇಜಿನಲ್ಲಿ ಆಚರಿಸಲಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ ಸಂದರ್ಭಗಳಲ್ಲಿ ಭಾಗವಹಿಸಿದ್ದರು. ಸ್ವಾಮಿ ವಿವೇಕಾನಂದರ ಚಿಕಾಗೋ ಭಾಷಣದ 125ನೇ ವರ್ಷಾಚರಣೆ ಸಲುವಾಗಿ ಹಮ್ಮಿಕೊಳ್ಳಲಾದ ಅಭಿಯಾನದಲ್ಲಿ ಭಾಗವಹಿಸಿದ್ದರು.

ನವಲಗುಂದ ಪಟ್ಟಣದ ನೀಲಮ್ಮನ ಕೆರೆಯ ದಡದ ಸುತ್ತಲೂ ಕಳೆ ಕಸವನ್ನು ಸ್ವಚ್ಛಗೊಳಿಸುವುದಲ್ಲದೇ ಜಲ ಮೂಲಗಳ ಸಂರಕ್ಷಣೆ ಜಲ ಮೂಲಗಳ ವೃದ್ಧಿಸಿಕೊಳ್ಳುವಂತೆ ಸಾರ್ವಜನಿಕರಿಗೆ ಅರಿವು ಮೂಡಿಸಿದರು. ಫೆಬ್ರವರಿ 21ರಂದು ನಗರದ ಸಾರ್ವಜನಿಕ ಆಸ್ಪತ್ರೆಯಲ್ಲಿ ರೋಗಿಗಳಿಗೆ ಸಹಕರಿಸುವ ಸೇವೆಯ ಜೊತೆಗೆ ಆಸ್ಪತ್ರೆಯ ಸ್ವಚ್ಛತೆಯಲ್ಲಿ ಸಹಕರಿಸಿದರು. ಫೆಬ್ರವರಿ 22ರಂದು ಕಾಲೇಜಿನ ಆವರಣದಲ್ಲಿ ಸಂಸ್ಥಾಪಕರ ಮತ್ತು ಚಿಂತನಾ ದಿನಾಚರಣೆಯನ್ನು




ಆಚರಿಸಲಾಯಿತು. ಮುಖ್ಯ ಅತಿಥಿಗಳಾಗಿ ತಾಲ್ಲೂಕು ಘಟಕದ ಭಾರತ್ ಗೈಡ್ಸ್ ಕಾರ್ಯದರ್ಶಿಗಳಾದ ಶ್ರೀಮತಿ ಪಾಲಾಕ್ಷಿ ಸಿ. ಯರಗಂಬಳಿ ಮಠ ಭಾಗವಹಿಸಿದ್ದರು.

* ಫೆಬ್ರವರಿ 22ರಂದು ಮಧ್ಯಾಹ್ನ ನಡೆದ ಕಾರ್ಯಕ್ರಮದಲ್ಲಿ ಸ್ಥಳೀಯ ಸ್ಕೌಟ್ಸ್-ಗೈಡ್ಸ್ ಹಾಗೂ ಸ್ಕೌಟರ್-ಗೈಡರ್‌ಗಳು ಸಮಾವೇಶಗೊಂಡು ಸಂಸ್ಥಾಪಕರ ದಿನಾಚರಣೆಯನ್ನು ಆಚರಿಸಲಾಯಿತು. ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರು




ಸಂಸ್ಥಾಪಕರ ಬಗ್ಗೆ ವಿವರಿಸಿದರು. ಪದಾಧಿಕಾರಿಗಳು ಮಾತನಾಡಿ ಮಕ್ಕಳಿಗೆ ಸಂಸ್ಥೆಯ ಮಹತ್ವವನ್ನು ತಿಳಿಸಿದರು. ಮಕ್ಕಳು ಸಂಸ್ಥಾಪಕರ ಬಗ್ಗೆ ಮಾತನಾಡಿ ಸಂಸ್ಥೆಯ ಸಂತಸವನ್ನು ವ್ಯಕ್ತಪಡಿಸಿದರು. ನಂತರ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸ್ಕೌಟ್-ಗೈಡ್‌ಗಳು ವಿವಿದ ಚಟುವಟಿಕೆಗಳನ್ನು ಸಾದರ ಪಡಿಸಿದರು.

## ಗದಗ

ಫೆಬ್ರವರಿ 27 ರಂದು ಶಿರಹಟ್ಟಿ ತಾಲ್ಲೂಕು ರ್‍ಯಾಲಿಯನ್ನು ಸರಕಾರಿ ಮಾದರಿ ಪ್ರಾಥಮಿಕ ಶಾಲೆ ಪುಟ್ಟಗಾಂವ ಬಡ್ಡಿಯಲ್ಲಿ ನಡೆಸಲಾಯಿತು. ರ್‍ಯಾಲಿಗೆ ಶ್ರೀ ಬಿ.ವಿ. ಸಾಲಿಮಠ ಕ್ಷೇತ್ರ ಶಿಕ್ಷಣಾಧಿಕಾರಿಗಳು ಚಾಲನೆ ನೀಡಿದರು. ರ್‍ಯಾಲಿಯಲ್ಲಿ ಶ್ರೀ ಆರ್.ಎಂ. ಕಮ್ಮಾರ, ಶ್ರೀ ಅಡತರಕರ, ಶ್ರೀಮತಿ ಹುಲಸೂರ, ಶ್ರೀ ಲಮಾಣಿ, ಶ್ರೀ ಚಬ್ಬಿ, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್‌ಗಳು, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 26 ರಿಂದ 27 ರ ವರೆಗೆ ಶಿರಹಟ್ಟಿ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ದ್ವಿತೀಯ ಸೋಪಾನ ಪೆಟ್ರೋಲ್ ಲೀಡರ್ಸ್ ಶಿಬಿರವನ್ನು ಸರಕಾರಿ ಮಾದರಿ ಪ್ರಾಥಮಿಕ ಶಾಲೆಯಲ್ಲಿ ನಡೆಸಲಾಯಿತು.

ಶ್ರೀ ಬಿ.ವಿ. ಸಾಲಿಮಠ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತನಾಡುತ್ತಾ ತಿಂಗಳಿಗೊಂದು ಸ್ಕೌಟ್-ಗೈಡ್ ಕಾರ್ಯಕ್ರಮ ಮಾಡುವುದರಿಂದ ಜನರಲ್ಲಿ ಸ್ಕೌಟ್ಸ್-ಗೈಡ್ಸ್ ಬಗ್ಗೆ ಅರಿವು ಮೂಡುತ್ತದೆ ಎಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಆರ್.ಎಂ. ಕಮ್ಮಾರ್ ಶ್ರೀ ಅಡತರಕರ, ಶ್ರೀ ಲಮಾಣಿ, ಶ್ರೀ ಮುಳುಗುಂದ, ಎಸ್.ಡಿ.ಎಂ.ಸಿ ಅಧ್ಯಕ್ಷರು, ಸದಸ್ಯರು, ಶಾಲೆಯ ಸಿಬ್ಬಂದಿ ವರ್ಗ, ಶ್ರೀಮತಿ ಹುಲಸುರ, ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಒ.ಸಿ. ಭಾಗವಹಿಸಿದ್ದರು.

* ಫೆಬ್ರವರಿ 22 ರಂದು ಗದಗ ಜಿಲ್ಲಾ ಸಂಸ್ಥೆ ವತಿಯಿಂದ ಸಂಸ್ಥಾಪಕರ ದಿನಾಚರಣೆ - ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಶ್ರೀನಿವಾಸಮೂರ್ತಿ, ತಹಶೀಲ್ದಾರರವರು ಹಸಿರು ನಿಶಾನೆಯೊಂದಿಗೆ ಜಿಲ್ಲಾ ರ್‍ಯಾಲಿಗೆ ಚಾಲನೆಯನ್ನು ನೀಡಿದರು. ಶ್ರೀ ರೆಡ್ಡೇರ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತನಾಡುತ್ತಾ, "ರ್‍ಯಾಲಿಯ ಉದ್ದೇಶ ಜನರಲ್ಲಿ ಸ್ಕೌಟ್ಸ್-ಗೈಡ್ಸ್ ಗಳು ಶಿಸ್ತಿನ ಸಿಪಾಯಿಗಳು ಎಂದು ಅರಿವು ಮೂಡಿಸುವುದು" ಎಂದು ತಿಳಿಸಿದರು. ಶ್ರೀ ಕೆಳದಿ ಮಠ, ಕ್ಷೇತ್ರ ಶಿಕ್ಷಣಾಧಿಕಾರಿ, ಗದಗ ಶಹರ ಮಾತನಾಡಿದರು. ಕಾರ್ಯಕ್ರಮದಲ್ಲಿ ಶ್ರೀಮತಿ ಸುಮಾ ಗರಗ, ಡಿ.ಸಿ.(ಗೈ.) ಶ್ರೀ ಸುರೇಶ ಗರಗ, ಉಪಾಧ್ಯಕ್ಷರು, ಶ್ರೀ ಈಶಣ್ಣಾ ಮುನವಳ್ಳಿ, ಡಿ.ಸಿ.(ಎಸ್.) ಶ್ರೀ ಜಿ.ಹೆಚ್. ಪುಜಾರ, ಜಿಲ್ಲಾ ಕಾರ್ಯದರ್ಶಿ ಶ್ರೀ ಶಾಂತಕುಮಾರ ಮಲ್ಲಾಪುರ ಆರ್.ಎಸ್.ಎಲ್. ಮುಂತಾದವರು ಭಾಗವಹಿಸಿದ್ದರು.







## ಹಾಸನ

ಜಿಲ್ಲಾ ಸಂಸ್ಥೆಯು ಫೆಬ್ರವರಿ 21 ರಿಂದ 23 ರ ವರೆಗೆ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ಮೂಟ್ ಕಾರ್ಯಕ್ರಮದಲ್ಲಿ 36 ರೋವರ್ಸ್, 72 ರೇಂಜರ್ಸ್‌ಗಳು ಹಾಗೂ ರೋವರ್ ಸ್ಕೌಟ್ ಲೀಡರ್ಸ್, ರೇಂಜರ್ಸ್‌ಗಳು ಭಾಗವಹಿಸಿದ್ದರು.

ಫೆಬ್ರವರಿ 21ರಂದು ಮೂಟ್‌ನ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಗಿಡಕ್ಕೆ ನೀರೆರೆಯುವುದರ ಮೂಲಕ ನೆರವೇರಿಸಿದರು. ಅವರು ಮಾತನಾಡುತ್ತಾ ಮೂಟ್ ಕಾರ್ಯಕ್ರಮವನ್ನು ಮೂರು ದಿನಗಳ ಕಾಲ ಹಮ್ಮಿಕೊಂಡಿದ್ದೇವೆ. ಸದರಿ ಮೂಟ್‌ನಲ್ಲಿ ಸಾಹಸಕ್ರೀಡೆಗಳು, ಜಲಸಂರಕ್ಷಣೆ ಪವಾಡ ರಹಸ್ಯ ಬಯಲು, ಜಾನಪದ ಗೀತೆ, ಭಾವಗೀತೆ, ಜಾಥ ಕಾರ್ಯಕ್ರಮ, ರಾಜ್ಯ ಪುರಸ್ಕಾರ್ ತಯಾರಿ, ಜೀವನ ಕೌಶಲ್ಯದ ಬಗ್ಗೆ ತರಬೇತಿ, ಛದ್ಮ ವೇಷಭೂಷಣ ಹೀಗೆ ಮೂರು ದಿನಗಳು ನಡೆಯನ್ನು ಮೂಟ್‌ಗೆ ಆಗಮಿಸಿರುವ ಎಲ್ಲಾ ಶಿಬಿರಾರ್ಥಿಗಳು ಸದ್ಬಳಕೆ ಮಾಡಿಕೊಂಡು ಸಾಮಾಜಿಕವಾಗಿ ಶಕ್ತಿಯಾಗಬೇಕು ಎಂದು ನುಡಿದರು. ಪುಲ್ವಾಮದಲ್ಲಿ ಹುತಾತ್ಮರಾದ ಯೋಧರಿಗೆ ಒಂದು ನಿಮಿಷದ ಕಾಲ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿ, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಂ.ಎಸ್. ಪ್ರಕಾಶ್, ಶಿಬಿರದ ನಾಯಕರಾದ ಶ್ರೀ ಆರ್.ಜಿ. ಗಿರೀಶ್, ಕು॥ ಹೆಚ್.ಎಂ. ಪ್ರಿಯಾಂಕ ಡಿ.ಓ ರೋವರ್ ಸ್ಕೌಟ್ ಲೀಡರ್‌ಗಳಾದ ಶ್ರೀ ಚೆನ್ನಯ್ಯ, ಶ್ರೀ ಜಯಣ್ಣ, ಶ್ರೀ ವಿನಯಕುಮಾರ್, ರೇಂಜರ್ ಲೀಡರ್‌ಗಳಾದ ಲತಾ, ಶ್ರೀಮತಿರಕ್ಷಿತ ಹಾಗೂ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಫೆಬ್ರವರಿ 22 ರಂದು ಸಂಸ್ಥಾಪಕರ ದಿನಾಚರಣೆ/ ಚಿಂತನಾ ದಿನಾಚರಣೆಯ ಕಾರ್ಯಕ್ರಮ ನಡೆಯಿತು ಈ ಕಾರ್ಯಕ್ರಮದಲ್ಲಿ 200ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಹಾಗೂ ಶಿಕ್ಷಕ-ಶಿಕ್ಷಕಿಯರು ಜಾಥಾದಲ್ಲಿ ಭಾಗವಹಿಸಿದ್ದರು. ಈ ಕಾರ್ಯಕ್ರಮಕ್ಕೆ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಹಾಗು ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಡಿ.ಜಿ. ಕೃಷ್ಣಗೌಡರು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿ, ಶಿಬಿರದ ನಾಯಕರು, ರೋವರ್ ಸ್ಕೌಟ್ ಲೀಡರ್, ರೇಂಜರ್ ಲೀಡರ್ಸ್, ಜಿಲ್ಲಾ ಪದಾಧಿಕಾರಿಗಳೂ ಹಾಗೂ 200 ರೋವರ್ಸ್, ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳೂ ಸ್ಕೌಟ್-ಗೈಡ್ ಭವನದಿಂದ ಹೊರಟು ಜಿಲ್ಲಾಧಿಕಾರಿಗಳ ಕಛೇರಿ ಮುಂಭಾಗದಿಂದ ಎನ್.ಆರ್. ಸರ್ಕಲ್ ಮೂಲಕ, ಸಿಟಿ ಬಸ್ ಸ್ಟ್ಯಾಂಡ್‌ನಿಂದ ಎಸ್.ಪಿ. ಕಛೇರಿ ಮೂಲಕ 11.00 ಗಂಟೆಗೆ ಭವನವನ್ನು ತಲುಪಲಾಯಿತು.



ಫೆಬ್ರವರಿ 23 ರಂದು ರೇಂಜರ್ಸ್‌ಗಳಿಗೆ ಶ್ರೀ ಸುರೇಶ್ ಗುರೂಜಿ ಜಿಲ್ಲಾ ಕಾರ್ಯದರ್ಶಿ ಇವರು ಯೋಗದ ಬಗ್ಗೆ ಮಾಹಿತಿಯನ್ನು ನೀಡಿ ನಂತರ ಯೋಗವನ್ನು ಪ್ರಾಯೋಗಿಕವಾಗಿ ಮಾಡಿಸಿದರು.

ಸಮಾರೋಪ ಸಮಾರಂಭ ಹಾಗೂ ಮತದಾನ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಎರಡನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ ಶ್ರೀ ಡಿ.ವೈ ಬಸಾಪುರ್‌ರವರು ಉದ್ಘಾಟಿಸಿ ಮಾತನಾಡುತ್ತಾ ಕಡ್ಡಾಯ ಮತದಾನದಿಂದ ಮಾತ್ರ ಉತ್ತಮ ಆಡಳಿತಗಾರರನ್ನು ಆಯ್ಕೆ ಮಾಡಲು ಸಾಧ್ಯ ಪ್ರತಿಯೊಬ್ಬರು ಮತದಾನದ ಮಹತ್ವ ತಿಳಿಯುವುದು ಮತ್ತು ಮತದಾನ ಮಾಡುವುದು ಬಹಳ ಮುಖ್ಯ ಎಂದು

ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಬಸವರಾಜ, ಸದಸ್ಯ ಕಾರ್ಯದರ್ಶಿ, ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ ಹಾಗು ವಕೀಲ ಸಂಘದ ಅಧ್ಯಕ್ಷ ಶ್ರೀ ಜೆ.ಪಿ. ಶೇಖರ್ ಆಗಮಿಸಿದ್ದರು. ಅಧ್ಯಕ್ಷತೆಯನ್ನು ವಹಿಸಿದಂತಹ ಡಾ॥ ವೈ. ಎಸ್. ವೀರಭದ್ರಪ್ಪನವರು ಮಾತನಾಡಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಸುಮಾರು 215ಕ್ಕೂ ಹೆಚ್ಚು ದೇಶಗಳಲ್ಲಿ ತನ್ನದೇ ಆದ ಸೇವೆಯನ್ನು ನೀಡುತ್ತಿದ್ದು, ಅದರಲ್ಲಿ ಮತದಾನ ಜಾಗೃತಿ ಅರಿವು ಮೂಡಿಸುವ ನಿಟ್ಟಿನಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ ಎಂದರು. ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಗಿರಿಜಾಂಬಿಕ ಎಂ.ಬಿ., ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ, ಶಿಬಿರದ ನಾಯಕರಾದ ಶ್ರೀ ಆರ್.ಜಿ. ಗಿರೀಶ್, ಕು॥ ಹೆಚ್.ಎಂ. ಪ್ರಿಯಾಂಕ ಉಪಸ್ಥಿತರಿದ್ದರು.

* ಫೆಬ್ರವರಿ 22ರಂದು ಸ.ಹಿ.ಪ್ರಾ.ಶಾಲೆ ಹೆತ್ತೂರು, ಸಕಲೇಶಪುರ ತಾಲ್ಲೂಕು ಇಲ್ಲಿ ಬೇಡನ್ ಪೊವೆಲ್‌ರವರ ದಿನಾಚರಣೆ ಹಾಗೂ 35 ಸ್ಕೌಟ್ಸ್, 40 ಗೈಡ್ಸ್‌ಗಳಿಗೆ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಗ್ರಾಮ ಪಂಚಾಯಿತಿ ಅಧ್ಯಕ್ಷ ಶ್ರೀ ಹೆಚ್.ಪಿ. ಶಿವಾನಂದ ಮುಖ್ಯ ಅತಿಥಿಗಳಾಗಿ ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ಕೃಷ್ಣನಾಯಕ್ ಪಾಲ್ಗೊಂಡಿದ್ದರು. 20 ಸ್ಕೌಟ್ ಮಾಸ್ಟರ್ಸ್ ಹಾಗೂ 15 ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಈ ರ‍್ಯಾಲಿಯು 500 ಮಕ್ಕಳೊಂದಿಗೆ ಕಾರ್ಯಕ್ರಮವು ಅತ್ಯಂತ ಯಾಶಸ್ವಿಯಾಗಿ ನಡೆಯಿತು.

* ಫೆಬ್ರವರಿ 22 ರಿಂದ 23 ರ ವರೆಗೆ ಹೊಯ್ಸಳೇಶ್ವರ ಪ.ಪೂ. ಕಾಲೇಜು ಅರಸೀಕೆರೆ ಇಲ್ಲಿ ಎರಡು ದಿನಗಳ ಕಾಲ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳ ಸಮಾವೇಶ ಹಾಗು ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರವನ್ನು ಅರಸೀಕೆರೆ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಮೋಹನ್ ಕುಮಾರ್ ರವರು ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ, ಶ್ರೀ ತಿಮ್ಮೇಶ್, ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪ, ಹೊಯ್ಸಳೇಶ್ವರ ಪ್ರಾಂಶುಪಾಲರಾದ ಶ್ರೀ ಪ್ರಭುದೇವ, ಜಿಲ್ಲಾ ಕಾರ್ಯದರ್ಶಿ, ಶ್ರೀ ಸುರೇಶ್ ಗುರೂಜಿಯವರು ಪಾಲ್ಗೊಂಡಿದ್ದರು.

* ಫೆಬ್ರವರಿ 16 ಮತ್ತು 17 ರಂದು ಎಸ್.ಜಿ.ಆರ್. ಪಬ್ಲಿಕ್ ಸ್ಕೂಲ್, ಹಳೇಬೀಡು ಇಲ್ಲಿ ಎರಡು ದಿನಗಳ ಕಾಲ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ 68 ಸ್ಕೌಟ್ಸ್, 58 ಗೈಡ್ಸ್‌ಗಳು ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಎಸ್.ಜಿ.ಆರ್. ಶಾಲೆಯ ಪ್ರಾಂಶುಪಾಲರಾದ ಶ್ರೀ ರೆಹಮಾನ್ ರವರು ವಹಿಸಿ ಈ ಶಿಬಿರವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಸದರಿ ಶಾಲೆಯ ಕಾರ್ಯದರ್ಶಿಯಾದ ಶ್ರೀ ಸುರೇಶ್ ಗುರೂಜಿ ಉಪಸ್ಥಿತರಿದ್ದರು. ತಾಲ್ಲೂಕು ಕಾರ್ಯದರ್ಶಿಯಾದ ಶ್ರೀ ಪರಶುರಾಮಪ್ಪ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲಾ ಇತರರು ಉಪಸ್ಥಿತರಿದ್ದರು.

*ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಕೊಣನೂರು ಬಿ.ಎಂ. ಶೆಟ್ಟಿ ಪ್ರಥಮ ದರ್ಜೆ ಕಾಲೇಜು ಅಂತಿಮ ವರ್ಷದ ವಿದ್ಯಾರ್ಥಿ ಹಾಗೂ ರೋವರ್ ಶ್ರೀ ಎ.ವಿ. ರಂಗಸ್ವಾಮಿ ಯವರು ಭಾರತೀಯ ಸೇನೆಗೆ (ಇಂಡಿಯನ್ ಆರ್ಮಿ) ಆಯ್ಕೆಯಾಗಿ ಹೈದರಾಬಾದಿನ ತರಬೇತಿ ಕೇಂದ್ರಕ್ಕೆ ಹೋಗುವ ಮುನ್ನ ಭಾರತ್ ಸ್ಕೌಟ್ಸ್-ಗೈಡ್ಸ ಜಿಲ್ಲಾ ಸಂಸ್ಥೆಯ ವತಿಯಿಂದ ಸನ್ಮಾನಿಸಿ ಶುಭ ಕೋರಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ, ಆಲೂರು ತಾಲ್ಲೂಕು ಕಾರ್ಯದರ್ಶಿ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಆರ್.ಜಿ. ಗಿರೀಶ್, ಜಿಲ್ಲಾ ಸಂಘಟಕಿ ಕು॥ ಹೆಚ್.ಎಂ. ಪ್ರಿಯಾಂಕ ಮುಂತಾದವರು ಹಾಜರಿದ್ದರು.





## ಹಾವೇರಿ

ಫೆಬ್ರವರಿ 22 ರಂದು ಸ್ಕೌಟ್ಸ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೋವೆಲ್‌ರವರ ಜನ್ಮ ದಿನಾಚರಣೆಯನ್ನು ಜೆ.ಪಿ. ರೋಟರಿ ಪ್ರೌಢಶಾಲೆಯಲ್ಲಿ ಆಚರಿಸಲಾಯಿತು. ಹಾಗೂ ಪುಲ್ವಾಮದಲ್ಲಿ ಮರಣ ಹೊಂದಿದ ಯೋಧರಿಗೆ ಮಕ್ಕಳಿಂದ ಮೇಣದ ಬತ್ತಿ ಹಚ್ಚಿ ಶ್ರದ್ಧಾಂಜಲಿ ಅರ್ಪಣೆ ಮಾಡಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಮಾಧುರಿ ದೇವಧರ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಆರ್.ಆರ್. ಕಾಶಪ್ಪನವರ ಶ್ರೀ ಮಲ್ಲಿಕಾರ್ಜುನ ಕೊಟೂರ, ಸ್ಥಾನಿಕ ಆಯುಕ್ತರು ಶ್ರೀ ಶರತ್ ಮಲ್ಲನಗೌಡ, ಸಂಸ್ಥೆ ಉಪಾಧ್ಯಕ್ಷರು ಶ್ರೀ ರವಿ ಹಿಂಚಿಗೇರಿ, ಶ್ರೀ ವಜ್ರ ಕುಮಾರ, ಶ್ರೀ ಎಂ.ಆರ್. ಪಾಟೀಲ ಡಿ.ಟಿ.ಸಿ. ಶ್ರೀ ದಳವಾಯಿ ಮುಖ್ಯೋಪಾಧ್ಯಾಯರು, ಜೆ.ಪಿ. ರೋಟರಿ, ಶ್ರೀ ಎ.ಎಲ್. ಶೇಖಸೂರಣಗಿ, ಡಿ.ಓ.ಸಿ., ಹಾಜರಿದ್ದರು. 200 ಸ್ಕೌಟ್ಸ್-ಗೈಡ್ಸ್, ಸ್ಕೌಟರ್ಸ್-ಗೈಡರ್ಸ್ ಗಳು ಭಾಗವಹಿಸಿದ್ದರು.



* ಫೆಬ್ರವರಿ 15 ರಿಂದ 16ರ ವರೆಗೆ ತಾಲ್ಲೂಕು ರ‍್ಯಾಲಿ ಅಕ್ಕಿ ಆಲೂರಿನಲ್ಲಿ ನಡೆಯಿತು. ಉದ್ಘಾಟನೆಯನ್ನು ಶ್ರೀ ಅಂದಾನೇಯ ವಡಗೇರಿ ಡಿ.ಡಿ.ಪಿ.ಐ., ಸ್ಕೌಟ್ಸ್ ಆಯುಕ್ತರು ದೀಪ ಬೆಳಗಿಸವುದರೊಂದಿಗೆ ನೆರವೇರಿಸಿದರು. 350 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.



*ಫೆಬ್ರವರಿ 22 ರಿಂದ 23ರ ವರೆಗೆ ರಾಣಿಬೆನ್ನೂರ ತಾಲ್ಲೂಕ ರ‍್ಯಾಲಿ ನಿಟ್ಟೂರ ಗ್ರಾಮದಲ್ಲಿ ನಡೆಯಿತು. ಶ್ರೀ ಶ್ರೀಧರ ಬಿ.ಇ.ಓ., ಗಿಡಕ್ಕೆ ನೀರು ಹಾಯಿಸುವುದರೊಂದಿಗೆ ಉದ್ಘಾಟನೆ ಮಾಡಿದರು. 400 ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು.

*Free Health Checkup Camp was organized at Government First Grade College, Ranebennur on 6th February 2019. Dr. Santosh Patil inaugurated the programme. Rangers of the college rendered service in the medical camp.

## ಕಾರವಾರ

ಸಂಸ್ಥಾಪಕರ ದಿನಾಚರಣೆಯನ್ನು ಕುಮಟಾದ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಹಾಗೂ ಹೊನ್ನಾವರದ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಚರಿಸಲಾಯಿತು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಬಿ.ಡಿ. ಫರ್ನಾಂಡೀಸ್ ಕಾರ್ಯದರ್ಶಿಶ್ರೀ ಹರಿದಾಸ ಹಾರುಭರೆ **HQC(S)** ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಕರಿಸಿದ್ದಪ್ಪ ಇವರುಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಸ್ವಚ್ಛತಾ ಅಭಿಯಾನ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಹಾಗೂ ಜಾಥಾ ನಡೆಸಲಾಯಿತು. ಮತ್ತು ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು. ನಮ್ಮ ದೇಶದ ಗಡಿ ಕಾಯುವ ಹುತಾತ್ಮ ಸೈನಿಕರಿಗೆ ಶ್ರದ್ಧಾಂಜಲಿ ಸಲ್ಲಿಸಲಾಯಿತು.

* ಫೆಬ್ರವರಿ 5 ರಿಂದ 6 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಕಾರವಾರ ಕಬ್ಸ್ ಬುಲ್‌ಬುಲ್‌ಸ್‌ಗಳ ಜಿಲ್ಲಾದರ್ಶನ ಕಾರ್ಯಕ್ರಮಕ್ಕೆ ಜಿಲ್ಲಾ ಮುಖ್ಯ ಆಯುಕ್ತರಾದ ಡಾ.ಜಿ.ಜಿ. ಸಭಾಯತ್ ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡಿಸ್ ಚಾಲನೆ ನೀಡಿದರು.



ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಸಿ.ಇ.ಓ., ಅವರ ಮಾರ್ಗದರ್ಶನದಂತೆ ವಿಜ್ಞಾನ ಕೇಂದ್ರ ಹಾಗೂ ರಾಕ್ ಗಾರ್ಡನ್ ಉದ್ಯಾನವನ ನಂತರ ಶ್ರೀ ಸಜ್ಜೇಶ್ವರ ದೇವಸ್ಥಾನಕ್ಕೆ ಭೇಟಿ ನೀಡಲಾಯಿತು. 51 ಕಬ್ಸ್- ಬುಲ್ ಬುಲ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 2 ರಂದು ಜಿಲ್ಲಾ ಮಟ್ಟದ ತೃತೀಯ ಸೋಪಾನ ಸಿದ್ಧತಾ ಶಿಬಿರವನ್ನು ಡಯೆಟ್, ಕುಮಟಾದಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರದ ಕಾರ್ಯಕ್ರಮದ ಚಾಲನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ನಾಗರಾಜ ನಾಯ್ಕ ಇವರು ನಡೆಸಿದರು. 280 ಸ್ಕೌಟ್ಸ್-ಗೈಡ್‌ಗಳು, 22 ಸ್ಕೌಟರ್-ಗೈಡರ್ ಗಳು ಭಾಗವಹಿಸಿದ್ದರು.

* ಫೆಬ್ರವರಿ 25 ರಂದು ಕಾರವಾರದ ಕುಮಟಾಕ್ಕೆ ರಾಜ್ಯ ಪ್ರಧಾನ ಆಯುಕ್ತರಾದ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಭೇಟಿ ನೀಡಿ ಜಿಲ್ಲಾ ಸಂಸ್ಥೆಯ ಕಾರ್ಯ ಚಟುವಟಿಕೆಯ ಬಗ್ಗೆ ಸಮಾಲೋಚನೆ ನಡೆಸಿದರು. ನಂತರ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಹಳದೀಪುರಕ್ಕೆ ಭೇಟಿ ನೀಡಿದರು. ಮಕ್ಕಳಿಗೆ ಸ್ಕೌಟ್ಸ್ -ಗೈಡ್ಸ್‌ನ ಪ್ರತಿಜ್ಞೆ ಮತ್ತು ನಿಯಮದ ಅಂಶವನ್ನು ಅಳವಡಿಸಿಕೊಂಡು ಉತ್ತಮ ನಾಗರಿಕರಾಗಿ ಸಮಾಜಕ್ಕೆ ರಾಷ್ಟ್ರಕ್ಕೆ ಒಳ್ಳೆಯ ಪ್ರಜೆಯಾಗಿರೆಂದು ಮಕ್ಕಳಿಗೆ ತಿಳಿಸಿದರು.





## ಕೊಪ್ಪಳ

ಫೆಬ್ರವರಿ 20 ರಿಂದ 21 ರ ವರೆಗೆ ಕೊಪ್ಪಳ ಜಿಲ್ಲಾ ಮಟ್ಟದ ಜಿಲ್ಲಾ ದರ್ಶನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಪ್ರಭಾಕರ್ ದಾಸರ್, ಎ.ಎಸ್.ಒ.ಸಿ. ಮಲ್ಲೇಶ್ವರಿ ಜುಜಾರೆ, ತಾಲೂಕಾ ಕಾರ್ಯದರ್ಶಿ ಶ್ರೀ ಮಲ್ಲಪ್ಪ ಗುಡದಣ್ಣನವರ್, ಖಜಾಂಚಿ ಶ್ರೀ ಮುಸ್ತಾಫ್ ಇವರುಗಳು ಆಗಮಿಸಿ ಉದ್ಘಾಟನಾ ಕಾರ್ಯಕ್ರಮವನ್ನು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಕೊಪ್ಪಳ ಕಛೇರಿ, ಮಳೆ ಮಲ್ಲೇಶ್ವರ ದೇವಸ್ಥಾನ, ಇಟಗಿ, ಕಲ್ಲೂರು, ಕುಕನೂರು, ಯಲಬುರ್ಗಾ, ಕನಕಗಿರಿಯಲ್ಲಿ ರಾತ್ರಿ 8 ಗಂಟೆಯಿಂದ 9 ಗಂಟೆಯವರೆಗೆ ಹುತಾತ್ಮ ಯೋಧರ ಆತ್ಮಶಾಂತಿಗಾಗಿ ಕ್ಯಾಂಡಲ್ ಜಾಥಾವನ್ನು ಆಯೋಜಿಸಲಾಗಿತ್ತು. ಪಂಪಾ ಸರೋವರ, ಮುನಿರಾಬಾದ್ ಪಾರ್ಕ್‌ಗಳಿಗೂ ಭೇಟಿ ನೀಡಲಾಯಿತು.



* ಫೆಬ್ರವರಿ 23 ರಂದು ಗಂಗಾವತಿ ತಾಲ್ಲುಕು ಮಟ್ಟದ ರ್‍ಯಾಲಿಯನ್ನು ನಗರದ ಕೇಂದ್ರ ಪ್ರಾಥಮಿಕ (ಸಿಪಿಎಸ್) ಶಾಲೆಯಲ್ಲಿ ನಡೆಸಲಾಯಿತು. ದಿವ್ಯ ಸಾನಿಧ್ಯವನ್ನು ಶ್ರೀಮನ್ನೃಪ ಡಾ. ಕೊಟ್ಟುರು ಸ್ವಾಮಿಗಳು ವಹಿಸಿದ್ದರು. ಕಲ್ಮಠ ಅಧ್ಯಕ್ಷರು ಶ್ರೀ. ಕೊ.ವಿ.ವ. ಸಂಘ ಗಂಗಾವತಿ ಹಾಗೂ ತಾಲ್ಲೂಕಾ ಮುಖ್ಯ ಆಯುಕ್ತರು ಕಾರ್ಯಕ್ರಮದ ಅಧ್ಯಕ್ಷರು ಶ್ರೀ ಹೆಚ್.ಎಂ. ಸಿದ್ರಾಮಸ್ವಾಮಿ ಇವರ ನೇತೃತ್ವದಲ್ಲಿ ನಡೆಸಲಾಯಿತು. ರ್‍ಯಾಲಿಯಲ್ಲಿ 450 ಸ್ಕೌಟ್ಸ್-ಗೈಡ್ಸ್, 50 ಸ್ಕೌಟ್-ಗೈಡ್ ಶಿಕ್ಷಕರು, 30 ರೋವರ್ಸ್-ರೇಂಜರ್ಸ್ ಬ್ಯಾಂಡ್ ಸೆಟ್ ಹೊಂದಿದ ತಂಡ ನಗರದಲ್ಲಿ ಪಥ ಸಂಚಲನ, ಗೌರವ ವಂದನೆ ಸ್ವೀಕಾರ ಎಲ್ಲವೂ ಯಶಸ್ವಿಯಾಗಿ ಜರುಗಿದವು. ಶ್ರೀಮತಿ ಅರುಣಾ ವಸ್ತ್ರದ, ಗೈಡ್ ಆಯುಕ್ತರು, ಶ್ರೀ ಬಿ.ಪಿ. ಚಂದ್ರಶೇಖರ, ಉಪ ಪೋಲೀಸ್ ಅಧೀಕ್ಷಕರು, ಗಂಗಾವತಿ ಮತ್ತಿತರ ಗಣ್ಯರು ಭಾಗವಹಿಸಿದ್ದರು.

## ಕೋಲಾರ

ಜನವರಿ 31 ರಂದು ಕೋಲಾರದ ಶ್ರೀ ಚನ್ನೇಗೌಡ ಮಹೇಶ್ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ಜಿಲ್ಲಾ ಪುರಸ್ಕಾರ್ (ತೃತೀಯ ಸೋಪಾನ್) ಮತ್ತು ನಿಪುಣ್ ಪ್ರಶಸ್ತಿ ಪ್ರಧಾನ ಸಮಾರಂಭವನ್ನು ಆಯೋಜಿಸಲಾಗಿತ್ತು. ಕೋಲಾರ ಜಿಲ್ಲೆಯ ಅಪರ ಜಿಲ್ಲಾಧಿಕಾರಿಗಳಾದ ಶ್ರೀಮತಿ ಕೆ. ಪುಷ್ಪಲತಾ ರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಮಾಣಪತ್ರ ವಿತರಿಸಿ ಶುಭಕೋರಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಕೆ.ವಿ. ಶಂಕರಪ್ಪ, ಶ್ರೀ ಕೆ.ಆರ್. ಸುರೇಶ್, ಶ್ರೀ ಜನಾರ್ಧನ್ ಶ್ರೀ ಎಂ.ವಿ. ಪ್ರಹ್ಲಾದ್ ರಾವ್, ಕಾಲೇಜಿನ ಪ್ರಾಂಶುಪಾಲರಾದ ಶ್ರೀ ರಾಜಕುಮಾರ್, ಆಡಳಿತಾಧಿಕಾರಿ ಶ್ರೀ ಪ್ರವೀಣ್ ಕುಮಾರ್ ಮುಂತಾದವರು ಭಾಗವಹಿಸಿದ್ದರು.

* ಫೆಬ್ರವರಿ 6 ರಿಂದ 7 ರಂದು ಕೋಲಾರ ಸ್ಥಳೀಯ ಸಂಸ್ಥೆ ವತಿಯಿಂದ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ಕೋಲಾರ ತಾಲ್ಲೂಕಿನ ಮುರಾರ್ಜಿ ದೇಸಾಯಿ ವಸತಿ ಶಾಲೆ ಮದನಹಳ್ಳಿ ಕ್ರಾಸ್ ಇಲ್ಲಿ ಆಯೋಜನೆ ಮಾಡಲಾಗಿತ್ತು. ಶಾಲೆಯ ಪ್ರಾಂಶುಪಾಲರಾದ ಶ್ರೀ ವೆಂಕಟರಮಣಪ್ಪ, ಜಿಲ್ಲಾ ಸಹಾಯಕ ಆಯುಕ್ತ ಶ್ರೀ ಅಶ್ವಥ್ ನಾರಾಯಣಗೌಡ ರವರು ಗಿಡಕ್ಕೆ ನೀರನ್ನು ಹಾಕುವ ಮೂಲಕ ಚಾಲನೆ ನೀಡಿದರು. ಈ ಶಿಬಿರದ ನಾಯಕರಾಗಿ ಶ್ರೀ ವಿನಯ್ ಕುಮಾರ್, ಕು॥ ಅಶ್ವಿನಿ ನಾಯಕಿಯಾಗಿ ಸೇವೆ ಸಲ್ಲಿಸಿದರು.

* ಫೆಬ್ರವರಿ 7 ರಂದು ಜಿಲ್ಲಾ ಸಂಸ್ಥೆ ವತಿಯಿಂದ ಜಂತುಹುಳು ನಿವಾರಣಾ ದಿನ ಹಾಗೂ ಪಲ್ಸ್ ಪೋಲಿಯೋ ಲಸಿಕೆ ಬಗ್ಗೆ ಸಾರ್ವಜನಿಕರಿಗೆ ರೋಟರಿ ಸಂಸ್ಥೆಯೊಂದಿಗೆ ಅರಿವು ಮೂಡಿಸುವ ಸಲುವಾಗಿ ಕೋಲಾರ ತಾಲ್ಲೂಕಿನ ವಿ.ಪಾಳ್ಯ ಹಾಗೂ ಶ್ರೀನಿವಾಸಪುರ



ತಾಲ್ಲೂಕಿನ ಬಗ್ಗಳಹಳ್ಳಿ ಗ್ರಾಮಗಳಲ್ಲಿ ಜಾಥಾ ನಡೆಸಿ ಅರಿವು ಮೂಡಿಸಲಾಯಿತು. ರೋಟರಿ ಅಧ್ಯಕ್ಷರಾದ ಶ್ರೀ ಶಂಕರೇಗೌಡ ಮತ್ತು ಕಾರ್ಯದರ್ಶಿ ಶ್ರೀ ವೆಂಕಟರಮಣಪ್ಪ ರವರು ಜಾಥಾಗೆ ಚಾಲನೆ ನೀಡಿದರು. ರೋಟರಿ ಸದಸ್ಯರಾದ ಶ್ರೀ ಸೋಮಶೇಖರ್, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಉಮಾದೇವಿ ಮುಂತಾದವರು ಭಾಗವಹಿಸಿದ್ದರು.

* ಫೆಬ್ರವರಿ 9 ಮತ್ತು 10 ರಂದು 9ನೇ ಜಿಲ್ಲಾ ಮಟ್ಟದ ವೃಕ್ಷಮಣಿಧಾರಕರ ಸಮಾವೇಶವನ್ನು ಕೆ.ಜಿ.ಎಫ್. ನಗರದ ಎಕ್ಸಲೆಂಟ್ ಶಾಲಾ ಆವರಣದಲ್ಲಿ ಆಯೋಜಿಸಲಾಗಿತ್ತು. ಈ ಶಿಬಿರಕ್ಕೆ ಶಾಲೆಯ ಅಧ್ಯಕ್ಷರು ಹಾಗು ಕೆ.ಜಿ.ಎಫ್. ಸ್ಥಳೀಯ ಸಂಸ್ಥೆಯ ಪರಿಷತ್ ಸಮಿತಿ ಅಧ್ಯಕ್ಷರಾದ ಶ್ರೀ ರಶೀದ್ ಖಾನ್ ರವರು ಚಾಲನೆ ನೀಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಎಲ್ಲಾ ಹಂತದ ಶಿಬಿರಗಳಿಗೆ ಬೇಕಾದ ಸಹಕಾರ ಸದಾ ನೀಡಲು ಸಿದ್ದನಿದ್ದೇನೆ ಎಂದು ತಿಳಿಸಿದರು. ಈ ಶಿಬಿರದಲ್ಲಿ ಜಿಲ್ಲೆಯ 38 ಹಿಮಾಲಯ ವೃಕ್ಷಮಣಿಧಾರಕರು ಭಾಗವಹಿಸಿದ್ದರು.

* ಫೆಬ್ರವರಿ 16 ರಂದು ಕೋಲಾರ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು.

* ಫೆಬ್ರವರಿ 17 ರಂದು ಕೋಲಾರ ನಗರದ ಬಸವೇಶ್ವರ ದೇವಾಲಯ ಆವರಣದಲ್ಲಿ ಆಂಬ್ಯುಲೆನ್ಸ್ ವ್ಯಾನ್ ಪ್ರಾವೀಣ್ಯತಾ ಪದಕ ತರಬೇತಿ ಶಿಬಿರವನ್ನು



ಆಯೋಜಿಸಲಾಗಿತ್ತು. ಎಸ್.ಎನ್.ಆರ್. ಆಸ್ಪತ್ರೆಯ ಶ್ರೀಯುತ ಯೋಗಿರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ತರಬೇತಿ ನೀಡಿದರು.

* ಫೆಬ್ರವರಿ 22 ರಂದು ಕೋಲಾರ ನಗರದ ಪ್ರಥಮ ದರ್ಜೆ ಕಾಲೇಜಿನಲ್ಲಿ ವಿಶ್ವ ಚಿಂತನಾ ದಿನಾಚರಣೆಯನ್ನು ನಡೆಸಲಾಯಿತು. ಈ ಸಮಾರಂಭಕ್ಕೆ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀಯುತ ಕೆ. ರತ್ನಯ್ಯ ರವರು ಚಾಲನೆ ನೀಡಿ "ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಚಟುವಟಿಕೆಗಳು ಶೈಕ್ಷಣಿಕ ಪ್ರಗತಿಗೆ ಪೂರಕವಾಗಿದ್ದು ಪೋಷಕರು ತಮ್ಮ ಮಕ್ಕಳನ್ನು ಸ್ಕೌಟ್ಸ್-ಗೈಡ್ಸ್‌ಗೆ ಸೇರಿಸಬೇಕು" ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಮಧುಲತಾ ಮೋಸಸ್, ರೋವರ್ ಲೀಡರ್ ರವಿಕುಮಾರ್ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ "ನಾಯಕತ್ವ ಗುಣಗಳನ್ನು ಬೆಳೆಸುವಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಪೂರಕವಾಗಿವೆ." ಎಂಬ ವಿಷಯದ ಮೇಲೆ ಪ್ರಬಂಧ ಬರೆದು ವಿಜೇತರಾದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಗಳಿಗೆ ಬಹುಮಾನಗಳನ್ನು ವಿತರಿಸಿ ಅಭಿನಂದಿಸಲಾಯಿತು.



* ಫೆಬ್ರವರಿ 21 ರಂದು ಬಂಗಾರಪೇಟೆ ಸ್ಥಳೀಯ ಸಂಸ್ಥೆ ವತಿಯಿಂದ ಹೈಕ್ ಪ್ರಾವೀಣ್ಯತಾ ಪದಕ ತರಬೇತಿ ಶಿಬಿರವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಗೋಪೇನಹಳ್ಳಿ ಶಾಲಾ ಆವರಣದಲ್ಲಿ ಆಯೋಜಿಸಲಾಗಿತ್ತು. ಶಿಬಿರದ ನಾಯಕರಾಗಿ ಶ್ರೀ ನಂಜುಂಡಪ್ಪ, ನಾಯಕಿಯಾಗಿ ಶ್ರೀಮತಿ ಭಾರ್ಗವಿ ರೆಡ್ಡಿ ಭಾಗವಹಿಸಿದ್ದರು.

## ಮೈಸೂರು

ಫೆಬ್ರವರಿ 9 ರಂದು ಮೈಸೂರಿನಲ್ಲಿ ಜಿಲ್ಲಾ ಮಟ್ಟದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್ ರ್‍ಯಾಲಿಯನ್ನು ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್-ಗೈಡ್ಸ್ ಕೇಂದ್ರ ಕಛೇರಿ ಮೈಸೂರು ಇಲ್ಲಿ ಏರ್ಪಡಿಸಲಾಗಿತ್ತು.

ಈ ರ್‍ಯಾಲಿಯಲ್ಲಿ ಸುಮಾರು 1300 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಟಿ.ಎಸ್. ಮೋಹನ್ ಕುಮಾರ್ ಎ.ಎಲ್.ಟಿ.(ಸ್ಕೌಟ್) ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಮಹಾಲಕ್ಷ್ಮಿ ಎ.ಎಲ್.ಟಿ.(ಗೈಡ್) ಗೈಡ್ ವಿಭಾಗಕ್ಕೆ ಶ್ರೀಮತಿ ಸರಸ್ವತಿ ಸುರೇಶ್ ಕಬ್ ವಿಭಾಗಕ್ಕೆ ಮತ್ತು ಶ್ರೀಮತಿ ರಾಜಲಕ್ಷ್ಮಿ ಬುಲ್‌ಬುಲ್ ವಿಭಾಗಕ್ಕೆ ನಾಯಕರುಗಳಾಗಿದ್ದರು.

ರ್‍ಯಾಲಿಯ ಉದ್ಘಾಟನೆಯನ್ನು ಶ್ರೀ ಗುಂಡಪ್ಪ ಗೌಡ, ಅಧ್ಯಕ್ಷರು, ವಿದ್ಯಾವರ್ಧಕ ಸಂಘ, ಮೈಸೂರು ರವರು ನೆರವೇರಿಸಿದರು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಖಜಾಂಚಿಗಳು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಕಬ್ಸ್-ಬುಲ್‌ಬುಲ್‌ಗಳಿಗೆ ಸ್ಥಳದಲ್ಲಿಯೇ ಚಿತ್ರ ಬರೆಯುವುದು, ಸಾಹಸ ಕ್ರೀಡೆಗಳು, ಸ್ಕೌಟ್ಸ್-ಗೈಡ್ಸ್‌ಗಳಿಗೆ ಧ್ವಜ ಸ್ತಂಭ ನಿರ್ಮಾಣ, ಗೀತಗಾಯನ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.



ಮಧ್ಯಾಹ್ನ 3.00 ಗಂಟೆಗೆ ನಡೆದ ಸಮಾರೋಪ ಸಮಾರಂಭಕ್ಕೆ ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಟಿ.ಎಸ್. ರವಿಶಂಕರ್ ಜಿಲ್ಲಾ ಸ್ಕೌಟ್ ಆಯುಕ್ತರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸಭೆಯಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತ ಕೋರಿದರು. ಶ್ರೀಮತಿ ಎಸ್. ಸುಜಂಯಾ, ಜಂಟಿ ಜಿಲ್ಲಾ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು. ಜಿಲ್ಲಾ ಸಂಸ್ಥೆಯು ಪದಾಧಿಕಾರಿಗಳು ಉಪಸ್ಥಿತರಿದ್ದರು ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು. ಕಾರ್ಯಕ್ರಮವನ್ನು ಶ್ರೀ ಎಂ.ವಿ. ಅಮರ್‌ನಾಥ್ ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತರು ನಿರೂಪಣೆ ಮಾಡಿದರು.

* ಫೆಬ್ರವರಿ 22 ರಂದು ಬೆಳಗ್ಗೆ 9.00 ಗಂಟೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಉತ್ತರ ವಲಯದ ವತಿಯಿಂದ ಕೆ.ಪಿ. ಶಾಲೆಯಲ್ಲಿ ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪೋವೆಲ್ ದಿನಾಚರಣೆಯ ಅಂಗವಾಗಿ ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಇದರ ಅಂಗವಾಗಿ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ 100 ಕ್ಕೂ ಅಧಿಕ ಕಬ್ಸ್-ಬುಲ್‌ಬುಲ್ಸ್ ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಆರ್.ಪಿ. ಚಂದ್ರು, ಜಿಲ್ಲಾ ಸಂಘಟಕರು, ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪೋವೆಲ್ ರವರ ಬಗ್ಗೆ ಮಾತನಾಡಿದರು. ಶ್ರೀ ರಾಮಕೃಷ್ಣ, ಸಹಾಯಕ ಜಿಲ್ಲಾ ಆಯುಕ್ತರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ರಾಜಮ್ಮ ಕಾರ್ಯದರ್ಶಿಗಳು, ಉತ್ತರ ವಲಯ ಸ್ಥಳೀಯ ಸಂಸ್ಥೆ ರವರು ಸ್ವಾಗತ ಕೋರಿದರು. ಶ್ರೀಮತಿ ರತ್ನಮ್ಮ, ಜಂಟಿ ಕಾರ್ಯದರ್ಶಿಗಳು, ಉತ್ತರ ವಲಯ ಸ್ಥಳೀಯ ಸಂಸ್ಥೆ ರವರು ವಂದನಾರ್ಪಣೆ ಮಾಡಿದರು. ಶ್ರೀ ಹರೀಶ್ ರವರು ಕಾರ್ಯಕ್ರಮದ ನಿರೂಪಣೆ ಮಾಡಿದರು. ನಂತರ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಶ್ರೀಮತಿ ಶಶಿಕಲಾ ಗೈಡರ್ ನಡೆಸಿಕೊಟ್ಟರು.

## ರಾಮನಗರ

ಸ್ಥಳೀಯ ಸಂಸ್ಥೆ ಕೋಡಿಹಳ್ಳಿ ಸಾತನೂರು ವಿಭಾಗದಲ್ಲಿ ತಾಲ್ಲೂಕು ರ್‍ಯಾಲಿ, ಸಂಸ್ಥಾಪಕರ ಜನ್ಮ ದಿನಾಚರಣೆ ಮತ್ತು ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಫೆಬ್ರವರಿ 23 ಮತ್ತು 24ರಂದು ಕೋಡಿಹಳ್ಳಿ ರಂಗ ಮಂದಿರದಲ್ಲಿ ಏರ್ಪಡಿಸಲಾಗಿತ್ತು. ದಿನಾಂಕ 23ರಂದು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ಗೌರಮ್ಮ ಕೆಂಪೇಗೌಡರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ, ಶ್ರೀ ನಂದೀಶ್, ಗ್ರಾಮ ಪಂಚಾಯತಿ ಅಧ್ಯಕ್ಷರು, ಶ್ರೀಮತಿ ಆರ್. ಚಿಂದಾರಿ ಗೌಡ, ಶ್ರೀ. ಜಮೀರ್ ಅಹಮದ್‌ರವರು ಭಾಗವಹಿಸಿದ್ದರು. ಶ್ರೀ. ಸಂಗಯ್ಯ ಮಠಪತಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಸ್ವಾಗತಿಸಿದರು.



ಸಮಾರೋಪ ಸಮಾರಂಭ ದಿನಾಂಕ 24ರಂದು ಸಂಜೆ ನಡೆಯಿತು. ಶ್ರೀ ಗಂಗಮಾತೇಗೌಡ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಜಿಲ್ಲಾ ಮುಖ್ಯ ಆಯುಕ್ತರು, ಸ್ಕೌಟ್ಸ್ ಮತ್ತು ಗೈಡ್ಸ್, ರಾಮನಗರ ಜಿಲ್ಲೆ, ಶ್ರೀ ಸೋಮಲಿಂಗಯ್ಯ, ಶ್ರೀ ಕೆ.ಎಂ. ಉಮಾಕಾಂತ, ಶ್ರೀ ಭುವನೇಶ್ವರಪ್ಪ, ಜಿಲ್ಲಾ ಸಂಸ್ಥೆಯ ಖಜಾಂಚಿ ಉಪಸ್ಥಿತರಿದ್ದರು. ಶ್ರೀ ಗಂಗಮಾತೇಗೌಡರು ಸಮಾರೋಪ ಭಾಷಣ ಮಾಡಿದರು. ಈ ಎರಡು ದಿನಗಳ ಕಾರ್ಯಕ್ರಮದಲ್ಲಿ ಜಿಲ್ಲೆಯ 5 ಸ್ಥಳೀಯ ಸಂಸ್ಥೆಗಳಿಂದ 560 ಸ್ಕೌಟ್ಸ್/ಗೈಡ್ಸ್, ರೋವರ್ಸ್, ರೇಂಜರ್ಸ್, ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಭಾಗವಹಿಸಿ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದರು.



## ರಾಯಚೂರು

ಜನವರಿ 7 ರಿಂದ 13 ರ ವರೆಗೆ ರಾಯಚೂರು ಜಿಲ್ಲಾ ಸಂಸ್ಥೆ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ನಂದಿನಿ ಶಿಕ್ಷಣ ಸಂಸ್ಥೆ ರಾಂಪೂರ ಇವರ ಸಹಯೋಗದಲ್ಲಿ ನಂದಿನಿ ಶಿಕ್ಷಣ ಮಹಾವಿದ್ಯಾಲಯದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕ/ಶಿಕ್ಷಕಿಯರಿಗಾಗಿ7 ದಿನಗಳ ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್ಸ್-ಫ್ಲಾಕ್ ಲೀಡರ್, ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಜನವರಿ 7ರಂದು ಶಿಬಿರದ ಉದ್ಘಾಟನಾ ಸಮಾರಂಭವನ್ನು



ಹಮ್ಮಿಕೊಳ್ಳಲಾಯಿತು. ಶ್ರೀ ಬಿ.ಕೆ. ನಂದನೂರ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ರಾಯಚೂರು ಇವರು ಸಸಿಗೆ ನೀರು ಉಣಿಸುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ನಂತರ ಅವರು ಮಾತನಾಡಿ ಪ್ರತಿಯೊಬ್ಬ ವಿದ್ಯಾರ್ಥಿಗಳಲ್ಲಿ ಹಾಗೂ ಯುವಕರಲ್ಲಿ ಶಿಸ್ತು, ಸೇವಾ ಮನೋಭಾವ, ದೇಶ ಭಕ್ತಿ ಮುಂತಾದ ಮಾನವೀಯ ಮೌಲ್ಯಗಳನ್ನು ಬೆಳೆಸಲು ಸ್ಕೌಟ್ಸ್-ಗೈಡ್ಸ್ ಸಹಕಾರಿಯಾಗಿದೆ ಎಂದು ಹೇಳಿದರು.

ಸಮಾರಂಭದ ಮುಖ್ಯ ಅತಿಥಿಗಳಾಗಿ ಮಾತನಾಡಿದ ಶ್ರೀ ನರಸಣ್ಣ, ಆಡಳಿತಾಧಿಕಾರಿಗಳು, ನಂದಿನಿ ಶಿಕ್ಷಣ ಸಂಸ್ಥೆ, ಶಿಸ್ತು ಬದ್ಧವಾದ ಜೀವನಕ್ಕೆ ಇಂಥ ತರಬೇತಿಗಳು ಅವಶ್ಯಕವಾಗಿವೆ. ತರಬೇತಿ ಪಡೆದ ಎಲ್ಲ ಶಿಕ್ಷಕರು ಪ್ರಾಮಾಣಿಕತೆಯಿಂದ ಶಾಲೆಗಳಲ್ಲಿ ಘಟಕಗಳನ್ನು ಪ್ರಾರಂಭಿಸಿ ವಿದ್ಯಾರ್ಥಿಗಳ ಸರ್ವತೋಮುಖ ಏಳಿಗೆಗೆ ಶ್ರಮಿಸಲು ಕರೆ ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಗೈಡ್ ಆಯುಕ್ತರು ವಹಿಸಿ ಮಾತನಾಡಿದರು. ಕಾರ್ಯಕ್ರಮದ ವೇದಿಕೆಯಲ್ಲಿ ಶ್ರೀ ವಿಜಯಕುಮಾರ ಕಟ್ಟಿಮನಿ ಪ್ರಾಂಶುಪಾಲರು, ಶ್ರೀ ಬಸವರಾಜ ಬೋರೆಡ್ಡಿ, ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಜಯಪ್ರಕಾಶ ರೆಡ್ಡಿ ದೈ.ಶಿ.ವಿ.ಪ. ಮಾನವಿ, ಶ್ರೀ ಶಾಂತರೆಡ್ಡಿ, ತರಬೇತಿ ನಾಯಕರುಗಳಾದ ಶ್ರೀ ಬಾಬುರಾವ್ ನಿಂಬೋರೆ ಬೀದರ್, ಶ್ರೀ ಕೃಷ್ಣಮೂರ್ತಿ ಮಂಡ್ಯ, ಶ್ರೀಮತಿ ಜಯಶ್ರೀ ಜೋಶಿ ಉಪಸ್ಥಿತರಿದ್ದರು. ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಖಜಾಂಚಿಗಳು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಅಜೀಜಾ ಸುಲ್ತಾನ ತರಬೇತಿ ನಾಯಕಿಯರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ದೇವೇಂದ್ರ ಕಟ್ಟಿಮನಿ ತರಬೇತಿ ಸಹಾಯಕರು ಕಾರ್ಯಕ್ರಮವನ್ನು ನಿರೂಪಿಸಿ ವಂದಿಸಿದರು.

ಜನವರಿ 12ರಂದು ಶಿಬಿರದ ಸಮಾರೋಪ ಸಮಾರಂಭ ನಡೆಯಿತು. ಈ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀ ನಲಿನ್ ಅತುಲ್, ಭಾ.ಆ.ಸೇ ಮುಖ್ಯ ಕಾರ್ಯನಿರ್ವಹಣ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಹಾಗೂ ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ರಾಯಚೂರು ಇವರು ಆಗಮಿಸಿ "ರಾಷ್ಟ್ರೀಯ ಯುವ ದಿನಾಚರಣೆ" ಕಾರ್ಯಕ್ರಮದಲ್ಲಿ ಸ್ವಾಮಿ ವಿವೇಕಾನಂದರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿ ಮಾತನಾಡಿದರು. "ಯುವಕರನ್ನು ದೇಶದ ಆಸ್ತಿಯಾಗಿ ಗುರಿಮಾಡಿಕೊಂಡು ಅವರನ್ನು ಸರಿಯಾದ ಮಾರ್ಗದಲ್ಲಿ ನಡೆಸಲು ಅವರಿಗೆ ಮಾರ್ಗದರ್ಶಕರ ಅವಶ್ಯಕವಿದೆ" ಎಂದರು.





ಕಾರ್ಯಕ್ರಮದ ಇನ್ನೋರ್ವ ಮುಖ್ಯ ಅತಿಥಿ ಡಾ. ಆರ್. ನರಸಿಂಹಮೂರ್ತಿ ಮಾಜಿ ಜಿಲ್ಲಾ ಆಯುಕ್ತರು (ಸ್ಕೌ) ಇವರು ಮಾತನಾಡಿ, ನಮ್ಮ ದೇಶವು ಸಮೃದ್ಧಿಹೊಂದಲು ಮತ್ತು ದೇಶದ ಭವಿಷ್ಯತ್ತಿಗಾಗಿ ಇಂದಿನ ಮಕ್ಕಳಿಗೆ ಉತ್ತಮ ಮಾನವೀಯ ಮೌಲ್ಯಗಳ ಶಿಕ್ಷಣವನ್ನು ಸ್ಕೌಟ್ಸ್-ಗೈಡ್ಸ್ ಮೂಲಕ ನೀಡುವುದು ಅವಶ್ಯಕವಾಗಿದೆ ಎಂದು ಹೇಳಿದರು.

ಈ ಸಮಾರಂಭದ ವೇದಿಕೆಯಲ್ಲಿ ಜಿಲ್ಲಾ ನೋಡಲ್ ಅಧಿಕಾರಿ ಶ್ರೀ ಎಸ್. ಹೆಚ್. ದೊಡ್ಡಮನಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಶ್ರೀ ಎಲ್.ಬಿ. ಹೊರಪ್ಯಾಟಿ ಜಿಲ್ಲಾ ಸ್ಥಾನಿಕ ಆಯುಕ್ತರು, ಮಾನವಿ ಅಧ್ಯಕ್ಷ ಶ್ರೀ ಬಿ. ಬಲರಾಮಕೃಷ್ಣ, ನಂದಿನಿ ಕಾಲೇಜಿನ ಅಧೀಕ್ಷಕ ಶ್ರೀ ಶಾಂತರೆಡ್ಡಿ ಉಪಸ್ಥಿತರಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಆಯುಕ್ತರು (ಗೈ) ಇವರು ವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಉನ್ನತ ತರಬೇತಿ ಪಡೆದ ಶ್ರೀಮತಿ ಉಷಾಬಾಯಿ ಫ್ಲಾಕ್ ಲೀಡರ್ ಮತ್ತು ಶ್ರೀಮತಿ ವಿದ್ಯಾ ಇವರುಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು. ಶ್ರೀ ರಾವುತರಾವ್ ಬರೂರ ಎಲ್ಲರನ್ನು ಸ್ವಾಗತಿಸಿದರು. ಶ್ರೀ ದೇವೇಂದ್ರ ಕಟ್ಟಿಮನಿ ತರಬೇತಿ ಸಹಾಯಕರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ನಾಗೇಶ ಡಿ.ಟಿ.ಸಿ., ವಂದಿಸಿದರು. ತರಬೇತಿ ಶಿಬಿರದಲ್ಲಿ 16 ಕಬ್ ಮಾಸ್ಟರ್, 40 ಸ್ಕೌಟ್ ಮಾಸ್ಟರ್ಸ್, 8 ಫ್ಲಾಕ್ ಲೀಡರ್ಸ್ ಹಾಗೂ 21 ಗೈಡ್ ಕ್ಯಾಪ್ಟನ್‌ಗಳು ತರಬೇತಿಗೆ ಹಾಜರಾಗಿದ್ದರು.

* ಫೆಬ್ರವರಿ 9 ರಂದು ರಾಯಚೂರು ತಾಲೂಕಿನ ದಿನ್ನಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಡಾ. ಸಂಗಮೇಶ್ವರ ಸರ್ದಾರ ಸ್ಕೌಟ್ ಘಟಕ ಹಾಗೂ ಶ್ರೀಮತಿ ಎಸ್.ಕೆ. ಪ್ರಭಾ ಗೈಡ್ಸ್, ಘಟಕಗಳ ದೀಕ್ಷಾ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀಮತಿ ವೈಶಾಲಿ ಪಾಟೀಲ್ ಮಾತನಾಡಿದರು.

ಈ ಸಂದರ್ಭದಲ್ಲಿ ಪಾಲಕರಾದ ಶ್ರೀ ಶ್ರೀನಿವಾಸ ದಿನ್ನಿ, ಶ್ರೀ ರವೀಶ ಬಿ.ಕೆ., ಶ್ರೀ ಅಶೋಕ ಪಾಟೀಲ್ ಶಿಕ್ಷಕರು ಮಾತನಾಡಿ ಮಕ್ಕಳಿಗೆ ಶುಭಕೋರಿದರು. ಶ್ರೀ ರಾವುತರಾವ್ ಬರೂರ ಸ್ಕೌಟ್ ಮಾಸ್ಟರ್ ಹಾಗೂ ಶ್ರೀಮತಿ ರಶ್ಮಿ ಗೈಡ್ ಕ್ಯಾಪ್ಟನ್ ಇವರು ಮಕ್ಕಳಿಗೆ ಪ್ರತಿಜ್ಞಾವಿಧಿ ಮೂಲಕ ದೀಕ್ಷೆ ನೀಡಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಶರಣಮ್ಮ ಇವರು ವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಶಿಕ್ಷಕರುಗಳಾದ ಶ್ರೀಮತಿ ಫ್ಲಾರೇನ್ಸ್ ಪದ್ಮಾ, ಶ್ರೀಮತಿ ಶೈಲಜಾ, ಶ್ರೀ ಭೀಮೇಶ ಪಾಲಕರಾದ ಶ್ರೀಮತಿ ಲಕ್ಷ್ಮೀ ಶ್ರೀ ಪ್ರಹಲ್ಲಾದ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಉಪಸ್ಥಿತರಿದ್ದರು.

* ಫೆಬ್ರವರಿ 22ರಂದು ಜಿಲ್ಲಾ ವಿಶ್ವ ಭ್ರಾತೃತ್ವ ದಿನಾಚರಣೆಯನ್ನು ರಾಯಚೂರಿನ ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಂದು ಬೆಳಿಗ್ಗೆ ಜಿಲ್ಲಾ ಸ್ಕೌಟ್ ಭವನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ನಂತರದಲ್ಲಿ ಕಾಶ್ಮೀರದ ಪುಲ್ವಾಮ ದಲ್ಲಿ ಉಗ್ರರ ದಾಳಿಗೆ ಹುತಾತ್ಮರಾದ ಸಿ.ಆರ.ಪಿ.ಎಫ್. ಯೋಧರಿಗೆ ಭಾವಪೂರ್ಣ ಶ್ರದ್ಧಾಂಜಲಿ ಸಲ್ಲಿಸಲಾಯಿತು. 400 ಸ್ಕೌಟ್ಸ್-ಗೈಡ್ಸ್‌ಗಳಿಂದ ಮಾನವ ಸರಪಳಿ ಮತ್ತು ಮತದಾರರ ಜಾಗೃತಿ ಜಾಥಾವನ್ನು ನಗರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಜಾತಾ ಕಾರ್ಯಕ್ರಮಕ್ಕೆ ಹೆಚ್ಚುವರಿ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಸ್.ಬಿ. ಪಾಟೀಲ್ ಅವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಸಂಸ್ಥೆಯಿಂದ ಮತದಾರರ ಜಾಗೃತಿ ಮೂಡಿಸಲು ಪ್ರಕಟಿಸಿರುವ ಭಿತ್ತಿಪತ್ರಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಬಿ.ಕೆ. ನಂದನೂರು ಅವರು ಬಿಡುಗಡೆ ಮಾಡಿ ಎಲ್ಲರಿಗೂ ಪ್ರಮಾಣವಚನ ಬೋಧಿಸಿದರು.

ಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆ, ದೇಶಭಕ್ತಿಗೀತೆಗಳ ನೃತ್ಯಗಳು ಹಾಗೂ ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು. ಮದ್ಯಾಹ್ನ ಸಂಸ್ಥಾಪಕರ ಜನ್ಮ ದಿನಾಚರಣೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಶ್ರೀಮತಿ ವಿಜಯಲಕ್ಷ್ಮೀ ಜಿಲ್ಲಾ ಪಂಚಾಯುತಿಯ ಸಹಾಯಕ ಕಾರ್ಯದರ್ಶಿಗಳು





ಚುನಾವಣಾ ವಿಭಾಗ ಇವರು ಸಂಸ್ಥಾಪಕರ ಭಾವಚಿತ್ರಗಳಿಗೆ ಮಾಲಾರ್ಪಣೆ ಮಾಡಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿ, ಜಗತ್ತಿನ ಪ್ರತಿಯೊಬ್ಬ ನಾಗರೀಕನೂ ಮಹಾನ್ ವ್ಯಕ್ತಿ ಬೇಡನ್ ಪೋವೆಲ್ ತತ್ವ ಸಿದ್ಧಾಂತಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಪರಿಸರದ ಬಗ್ಗೆ ಕಾಳಜಿ, ಪರಿಸರ ಸ್ವಚ್ಛತೆ, ದೇಶಾಭಿಮಾನ ಶಿಸ್ತು, ಸಮಯ ಪ್ರಜ್ಞೆಯಿಂದ ಕಾರ್ಯ ನಿರ್ವಹಿಸಿದರೆ ಉತ್ತಮ ದೇಶ ಕಟ್ಟಲು ಸಾಧ್ಯವಿದೆ ಎಂದರು.

## ಶಿವಮೊಗ್ಗ

ಫೆಬ್ರವರಿ 28 ರಂದು ಅಂಬೇಡ್ಕರ್ ಭವನ ಶಿವಮೊಗ್ಗದಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್-ಮತ್ತು ಬುಲ್‌ಬುಲ್‌ಗಳ ತೃತೀಯ ಚರಣ್ ಮತ್ತು ಸುವರ್ಣಪಂಕ್ ಪರೀಕ್ಷೆಯನ್ನು ಮುಗಿಸಿ ಉತ್ತೀರ್ಣರಾದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಸ್. ಉಮೇಶ ಶಾಸ್ತ್ರಿಯವರು ಸ್ವಾಗತವನ್ನು ಕೋರಿದರು. ನಂತರ ಶ್ರೀ ಎ.ವಿ. ರಾಜೇಶ, ಎ.ಎಲ್.ಟಿ.(ರೋ) ರವರು ಪುಲ್ವಾಮದಲ್ಲಿ ಮರಣಹೊಂದಿದ ಸಿ.ಆರ್.ಪಿ. ಯೋಧರಿಗೆ ಗೌರವಾರ್ಪಣೆಯನ್ನು ಸಲ್ಲಿಸುವ ಮೂಲಕ ದೇಶ ರಕ್ಷಣೆ ಕೇವಲ ಸೈನಿಕ ಕರ್ತವ್ಯವಲ್ಲ ಭಾರತದಲ್ಲಿ ಜನಿಸಿದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ, ಯಾವುದೇ ಜಾತಿ/ಧರ್ಮ/ವರ್ಣದ ಬೇಧವಿಲ್ಲದೇ ನಾವೆಲ್ಲರೂ ಒಟ್ಟಾಗಿ ದೇಶದ ಅಭಿವೃದ್ಧಿಯಲ್ಲಿ ಕೈ ಜೋಡಿಸೋಣವೆಂದರು.



ಸಮಾರಂಭದ ಪ್ರಾಸ್ತಾವಿಕ ನುಡಿಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ರವರು ನಿರ್ವಹಿಸಿದರು. ಅಪರ ಜಿಲ್ಲಾಧಿಕಾರಿ ಕುಮಾರಿ ಜಿ. ಅನುರಾಧಾ ಅವರು ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್‌ಗಳಿಗೆ ಪ್ರಶಸ್ತಿ ಪ್ರಧಾನ ಮಾಡಿ ಮಾತನಾಡುತ್ತಾ, ಸ್ಕೌಟ್-ಗೈಡ್ ಸಂಸ್ಥೆಯು ಭಾರತದ ಹೆಮ್ಮೆಯ ಸಂಸ್ಥೆಯಾಗಿದೆ. ಸ್ಕೌಟ್-ಗೈಡ್ ಸಂಸ್ಥೆಯು ಮಕ್ಕಳಲ್ಲಿ ನಾಯಕತ್ವ ಗುಣ, ದೇಶಪ್ರೇಮ, ಶಾಂತಿ, ಶಿಸ್ತು, ಸಹಕಾರ ಮತ್ತು ಸಹೋದರತ್ವ ಮನೋಭಾವನೆ ಬೆಳೆಸುವ ಮೂಲಕ ಮಕ್ಕಳನ್ನು ಭವಿಷ್ಯದ ಉತ್ತಮ ಪ್ರಜೆಗಳನ್ನಾಗಿ ನಿರ್ಮಾಣ ಮಾಡುವಲ್ಲಿ ದಿಟ್ಟ ಹೆಜ್ಜೆಯನ್ನು ಹಾಕುತ್ತಿರುವುದು ಸಂತಸದ ಸಂಗತಿ ಎಂದರು.

ಈ ಸಮಾರಂಭದ ಅತಿಥಿಗಳಾದ ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಎಸ್. ರುದ್ರೇಗೌಡ್ರು ಮಾತನಾಡುತ್ತಾ ಸ್ಕೌಟ್-ಗೈಡ್‌ಗಳ ಸೇವಾ ಮನೋಭಾವನೆ ಮತ್ತು ಶಿಸ್ತಿನ ಬಗ್ಗೆ ಪ್ರಶಂಸೆ ವ್ಯಕ್ತಪಡಿಸಿದರು. ನಾನು ಸಹಾ ಸುಮಾರು 20 ವರ್ಷಗಳಿಂದ ಸ್ಕೌಟ್-ಗೈಡ್ ಪದಾಧಿಕಾರಿಗಳೊಂದಿಗೆ ಹಾಗೂ ಸ್ಕೌಟ್-ಗೈಡ್‌ಗಳೊಂದಿಗೆ ಒಡನಾಟದಲ್ಲಿರುವುದಾಗಿ ತಿಳಿಸಿದರು. ಶ್ರೀ ಕೊಂಡಜ್ಜಿ ಬಸಪ್ಪ ರವರ ಜೀವನ ಮತ್ತು ಸಾಧನೆಯ ಬಗ್ಗೆ ಮಕ್ಕಳಿಗೆ ತಿಳಿಸಿದರು.

ನಂತರ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶಕುಂತಲಾ ಚಂದ್ರಶೇಖರ್ ರವರು ವಂದಿಸಿದರು. ಶ್ರೀಮತಿ ಭಾರತಿ ಡಾಯಸ್. ಎ.ಎಸ್.ಓ.ಸಿ. ರವರು ಕಾರ್ಯಕ್ರಮ ನಿರೂಪಿಸಿದರು.

## ತುಮಕೂರು

ಮಾರ್ಚ್ 8 ರಂದು ತುಮಕೂರು ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ವತಿಯಿಂದ ಸೇಂಟ್ ಮೇರೀಸ್ ಶಾಲಾ ಸಭಾಂಗಣದಲ್ಲಿ ವಿಶ್ವ ಮಹಿಳಾ ದಿನಾಚರಣೆಯನ್ನು



ಆಯೋಜಿಸಲಾಗಿತ್ತು. ಈ ಶಾಲಾ ವ್ಯವಸ್ಥಾಪಕರಾದ ರೆವರೆಂಡ್ ರೆಜೀನಾ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಂದರ್ಭದಲ್ಲಿ ಈ ಶಾಲೆಯ ಮುಖ್ಯ ಶಿಕ್ಷಕಿಯಾದ ಶ್ರೀಮತಿ ರೀಟಾ ಲಾರೆನ್ಸ್ ಮತ್ತು ತುಮಕೂರು ಮಹಾನಗರ ಪಾಲಿಕೆ ಇಂಜಿನಿಯರ್ ಶ್ರೀಮತಿ ವನಿತ ಎ.ಡಿ.ಜಿ.(ಜಿ) ಇವರುಗಳು ಮಹಿಳೆಯರು ಯಾವಾಗಲೂ ಪುರುಷರಂತೆ ಧೈರ್ಯಶಾಲಿಗಳಾಗಿ ಗುರಿಸಾಧಿಸುವಲ್ಲಿ ಸಮಾಜಸೇವೆಯಲ್ಲಿ ತೊಡಗಿಸಿಕೊಳ್ಳಬೇಕು. ವಿಜ್ಞಾನ ಕ್ಷೇತ್ರದಲ್ಲಿ, ಪೊಲೀಸ್ ಇಲಾಖೆಯಲ್ಲಿ ಹಾಗೂ ಸೈನ್ಯದಲ್ಲಿ ಮಹಿಳೆಯರು ಅತ್ಯುನ್ನತ ಹುದ್ದೆಯಲ್ಲಿದ್ದಾರೆ ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಶ್ರೀ ಕೆ.ಎಸ್. ಚಂದ್ರಶೇಖರ್ ಎಲ್ಲರನ್ನೂ ಸ್ವಾಗತಿಸಿದರು. ಶ್ರೀಮತಿ ಗಂಗಾಂಭಿಕಾ ಕೆ. ಎಲ್ಲರಿಗೂ ವಂದಿಸಿದರು.

## ಯಾದಗಿರಿ

ಫೆಬ್ರವರಿ 22 ರಂದು ಯಾದಗಿರಿ ಜಿಲ್ಲಾ ಸಂಸ್ಥೆಯಿಂದ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರ ಜನ್ಮ ದಿನದಂದು ವಿಶ್ವ ಚಿಂತನಾ ಹಾಗೂ ವಿಶ್ವಭ್ರಾತೃತ್ವ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ರ್‍ಯಾಲಿಯನ್ನು ಹಮ್ಮಿಕೊಳ್ಳಲಾಯಿತು. ಈ ರ್‍ಯಾಲಿಗೆ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ನಾಗರತ್ನ ಅನಪುರ ಅವರು ಹಸಿರು ನಿಶಾನೆ ತೋರಿಸುವುದರ ಮೂಲಕ ಚಾಲನೆ ನೀಡಿದರು. ನಗರದ ಪ್ರಮುಖ ರಸ್ತೆಗಳಲ್ಲಿ ಸಂಚರಿಸುತ್ತ ಪರಿಸರ ಸ್ವಚ್ಛತೆಯ ಘೋಷವಾಕ್ಯಗಳೊಂದಿಗೆ ರ್‍ಯಾಲಿಯನ್ನು ನಡೆಸಲಾಯಿತು. ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆ, ರಸಪ್ರಶ್ನೆ, ಚಿತ್ರಕಲೆ ಹಾಗೂ ಮಾದರಿ ವಸ್ತುಗಳ ತಯಾರಿ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ರಾಘವೇಂದ್ರ, ಜಿಲ್ಲಾ ಕಾರ್ಯದರ್ಶಿಗಳು ವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಸಿ.ಎಂ. ಪಟ್ಟೆದಾರ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಟಿ. ಕೆ. ರಾಜೇಂದ್ರ ಡಿ.ಟಿ.ಸಿ.(ಸ್ಕೌ), ವಿವಿಧ ಶಾಲೆಯ ಸುಮಾರು 400 ಸ್ಕೌಟ್ಸ್-ಗೈಡ್ಸ್, ಕಬ್ಸ್, ರೋವರ್ಸ್-ರೇಂಜರ್ಸ್ ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 22 ರಂದು ಸ್ಥಳೀಯ ಸಂಸ್ಥೆ ಶಹಾಪುರ ಜಿಲ್ಲಾ ಯಾದಗಿರಿ ವತಿಯಿಂದ ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪೋವೆಲ್‌ರವರ ಜನ್ಮದಿನ ಪ್ರಯುಕ್ತ ಶಹಾಪುರದ ಹೊಸ ಬಸ್ ನಿಲ್ದಾಣದಲ್ಲಿ ಸ್ವಚ್ಛತೆಯನ್ನು ಮಾಡಲಾಯಿತು. ಕಾರ್ಯಕ್ರಮದ ಉದ್ಘಾಟಕರಾಗಿ ತಹಸೀಲ್ದಾರರು ಆಗಮಿಸಿದ್ದರು. ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆ ಅದ್ಯಕ್ಷರಾದ ಶ್ರೀ ಶಿವರಾಜ ದೇಶಮುಖ, ಉಪಾಧ್ಯಕ್ಷರಾದ ಶ್ರೀಮತಿ ಇಂದಿರಾ ಉಪ್ಪಿನ, ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಸುಧಾಕರ ಗುಡಿ, ಬಸ್ ಡಿಪೋದ ಶ್ರೀ ಪಾಂಡುರಂಗ, ವರದಿಗಾರರಾದ ಶ್ರೀ ನಾರಾಯಣ ಸಗರ, ಡಾ. ಸಂತೋಷ, ರೋವರ್ ಲೀಡರ್ ಉಪಸ್ಥಿತರಿದ್ದರು. ಕಾರ್ಯಕ್ರಮವನ್ನು ಶ್ರೀಮತಿ ದೇವಮ್ಮ, ರೇಂಜರ್ ನಿರೂಪಿಸಿದರು. ಶ್ರೀ ಬಸವರಾಜ ಗೋಗಿ ಕಾರ್ಯದರ್ಶಿ ಪ್ರಾಸ್ತಾವಿಕವಾಗಿ ಮಾತನಾಡಿದರು.

ಈ ಕಾರ್ಯಕ್ರಮದಲ್ಲಿ 25 ರೋವರ್ಸ್, 25 ರೇಂಜರ್ಸ್ 60 ಗೈಡ್ಸ್, 75 ಸ್ಕೌಟ್ಸ್‌ಗಳು ಹಾಜರಿದ್ದರು. 8 ಸ್ಕೌಟ್ ಮಾಸ್ಟರ್ಸ್, 4 ಗೈಡ್ ಕ್ಯಾಪ್ಟನ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.





# ಕಾರವಾರದಲ್ಲಿ ರೈಫಲ್ ತರಬೇತಿ ಪಡೆದ ಶಿಬಿರಾರ್ಥಿಗಳ ಅನಿಸಿಕೆಗಳು

**ನನ್ನ ಹೆಸರು ಶಿಲ್ಪ. ಎಸ್. ನಾಯ್ಕ** ನಾನು ಹೊನ್ನಾವರ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ 4ನೇಯ ಸೆಮಿಸ್ಟರ್, ಬಿ.ಎ., ಪದವಿ ವ್ಯಾಸಂಗ ಮಾಡುತ್ತಿದ್ದು, ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರೇಂಜರ್ ವಿಭಾಗದಲ್ಲಿ, ರೇಂಜರ್ ಆಗಿದ್ದೇನೆ. ಇದೆ ಫೆಬ್ರವರಿ 8 ರಿಂದ 12ರ ವರೆಗೆ ಕಾರವಾರ ನಗರದ ಪೊಲೀಸ್ ಪೆರೇಡ್ ಮೈದಾನದಲ್ಲಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿಂದ ನಡೆಸಲಾದ ರೈಫಲ್ ತರಬೇತಿ ಶಿಬಿರದಲ್ಲಿ ಬಾಗವಹಿಸಲು ಅವಕಾಶ ಮಾಡಿಕೊಟ್ಟಿದ್ದಕ್ಕೆ ಜಿಲ್ಲಾ ಸಂಸ್ಥೆಯವರಿಗೆ ಮತ್ತು ರಾಜ್ಯ ಸಂಸ್ಥೆಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ಜಿಲ್ಲಾಧಿಕಾರಿಯವರಾದ ಶ್ರೀ ಎಸ್.ಎಸ್. ನಕುಲ್, ಜಿಲ್ಲಾ ಪೊಲೀಸ್ ಮುಖ್ಯಸ್ಥರಾದ ಶ್ರೀ ವಿನಾಯಕ ಪಾಟೀಲ್ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಫರ್ನಾಂಡೀಸ್, ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಬಾಹಿತ್ ಮತ್ತೆಲ್ಲರಿಗೂ ಪ್ರಥಮವಾಗಿ ವಂದಿಸುತ್ತೇನೆ.

ನಾವೆಂದೂ ರೈಫಲ್, ಗನ್ ಮತ್ತು ಪಿಸ್ತೂಲು ಮುಟ್ಟಿದ್ದೇ ಇಲ್ಲ. ಅದನ್ನು ನಾವು ಚಲನಚಿತ್ರಗಳಲ್ಲಿ ಮತ್ತು ಟಿ.ವಿ.ಯಲ್ಲಿ ಕಂಡದ್ದು ಮಾತ್ರ. ಅದನ್ನು ಕಂಡರೇ ನಮಗೆ ಭಯ. ಈ ಸಂದರ್ಭದಲ್ಲಿ ಅವುಗಳನ್ನು ಮುಟ್ಟುವುದು. ಅದನ್ನು ತೆಗೆದುಕೊಂಡು ವಿವಿಧ ಬಗೆಯಲ್ಲಿ ಶೂಟಿಂಗ್ ಮಾಡುವ ಅವಕಾಶ ನಮ್ಮದಾಯಿತು. ಇದು ನಮ್ಮ ಅದೃಷ್ಟವೆಂದೇ ಭಾವಿಸುತ್ತೇನೆ. ರೈಫಲ್‌ನೊಂದಿಗೆ ಪಥ ಸಂಚಲನ ಮಾಡುವುದನ್ನು ಸಹಾ ನಮಗೆ ಕಲಿಸಲಾಯಿತು. ಸುಮಾರು 3.5 ಕೆ.ಜಿ ತೂಕವಿರುವ ರೈಫಲ್‌ನ್ನು ಎತ್ತಿ ಹಿಡಿದು ವಿವಿಧ ಭಂಗಿಯಲ್ಲಿ ಶೂಟ್ ಮಾಡುವ ವಿಧಾನವನ್ನು ಕಲಿತವು. ರೈಫಲ್‌ನ್ನು ನೆಲಕ್ಕೆ ಮುಟ್ಟಿಸುವುದಾಗಲಿ. ಬೀಳಿಸುವುದಕ್ಕೆ ಅವಕಾಶವಿಲ್ಲ. ನಿಜವಾದ ಬುಲೆಟ್‌ಗಳಿಂದ ಟಾರ್ಗೆಟ್ ಪಾಯಿಂಟ್‌ಗೆ ಶೂಟು ಮಾಡುವುದನ್ನು ನಮಗೆ ಕಲಿಸಲಾಯಿತು. ನಮಗೆ ಭಯ, ನಡುಕ, ಬೆವರು ಬಂದರೂ ನಮ್ಮ ಹಿಂದೆ ಇದ್ದ ಪೊಲೀಸ್ ಅಧಿಕಾರಿಗಳು ಧೈರ್ಯ ತುಂಬುತ್ತಿದ್ದರು. .22 ಮತ್ತು ಎಸ್.ಎಲ್.ಆರ್. ರೈಫಲ್‌ಗಳ ಬಗ್ಗೆ ನಮಗೆ ಎಲ್ಲಾ ಮಾಹಿತಿಗಳು ದೊರೆತವು. ಸಹನೆಯಿಂದ ನಮಗೆ ತರಬೇತಿ ನೀಡಿದ ಪೊಲೀಸ್ ಅಧಿಕಾರಿಗಳಿಗೆ ಜವಾಬ್ದಾರಿ ಹೆಚ್ಚಾಗಿದೆಯೆಂದು ನಾನು ಭಾವಿಸುತ್ತೇನೆ. ಈ ಹೊಸ ಕಾರ್ಯಕ್ರಮ ಉಪಯುಕ್ತ ತರಬೇತಿ ಎಲ್ಲರಿಗೂ ದೊರಕಲಿ ಎಂದು ಆಶಿಸುತ್ತೇನೆ.

**ನನ್ನ ಹೆಸರು ಕಿರಣಕುಮಾರ** ನಾನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕುಮಟಾದಲ್ಲಿ 6ನೇ ಸೆಮಿಸ್ಟರ್‌ನಲ್ಲಿ ಬಿ.ಕಾಂ. ಪದವಿ ವ್ಯಾಸಂಗ ಮಾಡುತ್ತಿದ್ದ ನಾನು ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ರೋವರ್ ವಿಭಾಗದಲ್ಲಿ ರಾಜ್ಯ ಪುರಸ್ಕಾರವನ್ನು ಕೂಡ ಮಾಡಿದ್ದು ನನಗೆ 2018-19 ನೇ ಸಾಲಿನಲ್ಲಿ ಫೆಬ್ರವರಿ 8 ರಿಂದ 12 ರ ವರೆಗೆ ಕಾರವಾರನಗರದ ಪೋಲಿಸ್ ಪೆರೇಡ್ ಗ್ರೌಂಡ್‌ನಲ್ಲಿ ನೀಡಿದ ರೈಫಲ್ ತರಬೇತಿ ಶಿಬಿರದಲ್ಲಿ ಭಾಗವಹಿಸಲು ಅವಕಾಸ ಮಾಡಿಕೊಟ್ಟಿದ್ದಕ್ಕೆ ಭಾರತ ಸ್ಕೌಟ್ ಮತ್ತು ಗೈಡ್‌ನ ರಾಜ್ಯ ಸಂಸ್ಥೆಯ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಹಾಗೂ ಜಿಲ್ಲಾಧಿಕಾರಿಗಳಾದ ಶ್ರೀ ಎಸ್.ಎಸ್. ನಕುಲರವರು ಎಸ್.ಪಿ. ಯವರಾದ ಶ್ರೀ ವಿನಾಯಕ ಪಾಟೀಲರವರು ಮತ್ತು ಪೊಲೀಸ್ ಇಲಾಖೆಯ ಅಧಿಕಾರಿಗಳಿಗೆ ನನ್ನ ಕೃತಜ್ಞತೆಗಳು

ಈ ಶಿಬಿರಕ್ಕೆ ಬಂದ ನಾವೆಲ್ಲರೂ ಭಾಗ್ಯಶಾಲಿಗಳೇ, ಕಾರಣ ನಮಗೆ ರೈಫಲ್, ಪಿಸ್ತೂಲ್ ಮತ್ತು ಗನ್ ಎಂದೂ ಮುಟ್ಟಿರಲಿಲ್ಲ. ಆದರೆ ಅದನ್ನು ಮುಟ್ಟುವ ಅವಕಾಶ ಇಲ್ಲಿ ದೊರಕಿತು. ಮೊದಲನೆ ದಿನ ಮಧ್ಯಾಹ್ನ ರೈಫಲ್‌ನಲ್ಲಿ . 22 ರೈಫಲ್ ಮತ್ತು ಎಸ್.ಎಲ್.ಆರ್. ರೈಫಲ್‌ಗಳ ಬಗ್ಗೆ ಪೊಲೀಸ್ ತರಬೇತಿ ಅಧಿಕಾರಿಗಳು ಚಿತ್ರ ಬಿಡಿಸುವ ಮೂಲಕ ತೋರಿಸಿ ಬರೆಸಿದರು. 2ನೇ ದಿನ ರೈಫಲ್ ಹೇಗೆ ಹಿಡಿಯಬೇಕು ಯಾವ ರೀತಿ ಹಿಡಿದುಕೊಳ್ಳಬೇಕು ಅದರ ಮಹತ್ವವೇನು ಮತ್ತು ಅಉದ ನಮ್ಮ ಕೈಯಲ್ಲಿದ್ದಾಗ ನಾವು ಎಷ್ಟು ಜವಾಬ್ದಾರಿಯಿಂದಿರಬೇಕು ತಿಳಿಸಿದರು. ನಂತರ ನಮಗೆ ರೈಫಲ್ ಕೈಯಲ್ಲಿ ಕೊಟ್ಟು ಮಾರ್ಚ್ ಫಾಸ್ಟ್ ಮಾಡಿಸಿದರು. ನಂತರ ನಿಂತು ಫೈಯರ್ ಮಾಡುವ ಬಗ್ಗೆ, ಕುಳಿತು ಫೈಯರ್ ಮಾಡುವ ಬಗ್ಗೆ ಮತ್ತು ಮಲಗಿ ಫೈಯರ್ ಮಾಡುವ ಬಗ್ಗೆ ತೋರಿಸಿಕೊಟ್ಟರು. 5ನೇ ದಿನ ನಮಗೆ ರೈಫಲ್ ಕೊಟ್ಟು ನಮ್ಮೆದುರಿಗಿರುವ ಟಾರ್ಗೆಟ್ ಪಾಯಿಂಟ್‌ಗೆ ಗುರಿಯಿಟ್ಟು ಹೊಡೆಯಲು ಇನ್ಸ್‌ಪೆಕ್ಟರ್ ರವರು ಸೂಚಿಸಿದರು. ನಾವು ನಮ್ಮ ನಮ್ಮ ಟಾರ್ಗೆಟ್‌ನ ಎದುರು ನಿಂತು ಕುಳಿತು ಮತ್ತು ಮಲಗಿ ಫೈಯರ್ ಮಾಡಿದೆವು. ನಮಗೆ ರೋವರಿಂಗ್‌ನಲ್ಲಿಯೂ ಕೂಡ ಎನ್.ಸಿ.ಸಿ. ಪೊಲೀಸ್, ಮಿಲಿಟರಿಯವರ ತೇರಬೇತಿ ಇದ್ದಿದ್ದು ತುಂಬಾ ಸಂತೋಷದಾಯಕವಾಯಿತು.



# ನಾರ್ಮನ್ ರಾಕ್‌ವೆಲ್

ಎಂ.ಎನ್. ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

**ವರ್ಣ ಚಿತ್ರಗಳ ಮೂಲಕ ಬಾಯ್ ಸ್ಕೌಟ್ ಚಟುವಟಿಕೆಗಳನ್ನು ಅಮರವಾಗಿಸಿದ ಮಹಾನ್ ಕಲಾವಿದ.**

1912 ರಲ್ಲಿ, 18 ವರ್ಷದ ಕೃಷಕಾಯದ ಯುವಕನೊಬ್ಬ, ಅಮೆರಿಕದ ಬಾಯ್ ಸ್ಕೌಟ್ಸ್ ಮಾಸಪತ್ರಿಕೆ, "ಬಾಯ್ಸ್ ಲೈಫ್"ಗೆ ವರ್ಣ ಚಿತ್ರಗಳನ್ನು ಬರೆಯುವ ಉದ್ಯೋಗಕ್ಕಾಗಿ ಬಂದವನು ತನ್ನ ಮೊದಲನೆಯ ಗುತ್ತಿಗೆಯನ್ನು ಗಿಟ್ಟಿಸಿಕೊಂಡೇ ಹೊರಟನು. ಈ ಯುವಕನೇ, ನಾರ್ಮನ್ ರಾಕ್‌ವೆಲ್. ಮುಂದೆ ಸುಮಾರು 60ವರ್ಷಗಳಿಗೂ ಹೆಚ್ಚು, "ಬಾಯ್ ಸ್ಕೌಟ್ಸ್ ಆಫ್ ಅಮೇರಿಕಾ"ದ ಅವಿಭಾಜ್ಯ ಅಂಗವಾಗಿ, ಸ್ಕೌಟ್ ಚಳವಳಿಯ ಚಟುವಟಿಕೆಗಳನ್ನು ವರ್ಣಚಿತ್ರಗಳ ಮೂಲಕ ಜೀವ ತುಂಬಿ, ನಮ್ಮ ಮುಂದೆ ತೆರೆದಿಟ್ಟು, ಇಡೀ ಚಳುವಳಿಗೇ ಒಂದು ಹೊಸ ರೂಪ, ಅರ್ಥ ಮತ್ತು ಆಯಾಮವನ್ನು ಸೃಷ್ಟಿಸಿದ ವರ್ಣ ಮಾಂತ್ರಿಕ ನಾರ್ಮನ್ ರಾಕ್‌ವೆಲ್ !

ಸುಮಾರು 20ಲಕ್ಷ ಪ್ರತಿಗಳು ಮಾರಾಟವಾಗುತ್ತಿದ್ದ, ಅಮೆರಿಕದ ಸ್ಕೌಟ್ ಚಳವಳಿಯ ಧ್ವನಿ, "ಬಾಯ್ಸ್ ಲೈಫ್" ಮಾಡಿವಲ್ಲದೆ, ಸ್ಕೌಟ್ ಕ್ಯಾಲೆಂಡರ್‌ಗಳಿಗೆ ಕೂಡಾ ಅದ್ಭುತವಾದ ತೈಲ ಚಿತ್ರಗಳು ರಾಕ್‌ವೆಲ್ಲರ ಕುಂಚದಿಂದ ಮೂಡಿ ಬಂದಿವೆ. ಅಮೆರಿಕಾದ ಪ್ರಮುಖ ಕಲಾಕಾರರನ್ನು ಹೆಸರಿಸಿ ಎಂದರೆ, ಮೊದಲ ಸಾಲಲ್ಲಿ ನಿಲ್ಲುವವರಲ್ಲಿ ನಾರ್ಮನ್ ರಾಕ್‌ವೆಲ್ ಕೂಡಾ ಒಬ್ಬರು. "ಬಾಯ್ಸ್ ಲೈಫ್" ಮತ್ತಿತರ ನಿಯತಕಾಲಿಕಗಳ ಮುಖ ಪುಟದ ಕಲಾಕೃತಿಗಳ ಮೂಲಕ ಅಮೆರಿಕನ್ನರ ಹೃದಯದಲ್ಲಿ ಅಚ್ಚಳಿಯದ ಛಾಪನ್ನು ಒತ್ತಿದ್ದಾರೆ. ಸರ್ವೇಸಾಮಾನ್ಯರ ನೋವು, ನಲಿವು, ದುಗುಡ, ಹಾಸ್ಯ, ಮತ್ತೆಲ್ಲ ಸಹಜ ಭಾವಗಳನ್ನು ಯಥಾವತ್ತಾಗಿ ಮತ್ತು ಯಶಸ್ವಿಯಾಗಿ ಹಿಡಿದಿಡುವ ಅದ್ಭುತ ಕಲೆ ರಾಕ್‌ವೆಲ್ಲರಿಗೆ ಕರತಲಾಮಲಕವಾಗಿರುವುದು ಕಂಡುಬರುತ್ತದೆ.

ಇವರಿಗೆ ಚಿತ್ರಕಲೆ, ತಂದೆ ಮತ್ತು ತಾತನಿಂದ ಬಂದ ಬಳುವಳಿ, ಚಿತ್ರದ ಸೂಕ್ಷ್ಮವಾದ ವಿವರಗಳಿಗೆ ರಾಕ್‌ವೆಲ್ ನೀಡುವ ಮಹತ್ವ ಆಶ್ಚರ್ಯಕರ. ಸೂಕ್ತವಾದ ರೂಪದರ್ಶಿಗಳಿಗಾಗಿ ಊರೆಲ್ಲಾ ಏಕೆ, ನಾಡೆಲ್ಲಾ ಸುತ್ತುತ್ತಿದ್ದರು. ಒಮ್ಮೆಯಂತೂ ತನ್ನ ಚಿತ್ರಕ್ಕಾಗಿ ಬೇಕಾಗಿರುವ ಸ್ಟೂಲ್ ಒಂದಕ್ಕಾಗಿ ಹರಾಜು ಮಳಿಗೆಗಳು ಮತ್ತು ಪ್ರಾಚೀನ ವಸ್ತುಗಳನ್ನು ಮಾಡುವ ಅಂಗಡಿಗಳನ್ನೆಲ್ಲಾ ಜಾಲಾಡಿಕೊಂಡಿದ್ದುಂಟು. ಒಮ್ಮೆಯಂತೂ ತನ್ನ ರೂಪದರ್ಶಿಗೆ ಬೇಕಾದ ಹಳೆಯ ಉಡುಪಿಗಾಗಿ ಊರೆಲ್ಲಾ ಸುತ್ತಿ ಕೊನೆಗೆ ಅವರ ಕಣ್ಣಿಗೆ ಬಿದ್ದದ್ದು ಒಬ್ಬ ಭಿಕ್ಷುಕ. ಇಬ್ಬರೂ ಉಡುಪನ್ನು ಅದಲು ಬದಲು ಮಾಡಿಕೊಂಡು ತನ್ನ ಗುರಿ ಸಾಧಿಸಿಕೊಂಡರು. ಭಿಕ್ಷುಕನು ಏನೆಂದುಕೊಂಡಿರಲಿಕ್ಕಿಲ್ಲ.!

ಮೊದಲಿನಿಂದಲೂ ಕಲೆಯ ಬಗ್ಗೆ ಒಲವಿದ್ದರೂ ಕೂಡಾ ನ್ಯೂಯಾರ್ಕಿನ ಕಲಾಶಾಲೆಯ ಸಂಪರ್ಕ ಬಂದಮೇಲೆ, ಸಾಂಪ್ರದಾಯಕ ಶಾಲೆಯನ್ನು ಬಿಟ್ಟು, ಕಲೆಯನ್ನೇ ತನ್ನ ಜೀವನದ ಗುರಿಯಾಗಿ ಸ್ವೀಕರಿಸಿದ್ದು ಕಲಾ ಲೋಕಕ್ಕೆ ಲಾಭವೇ ಸರಿ. 1918ರಲ್ಲಿ ನೌಕಾಪಡೆ ಸೇರಿದ ಮೇಲೆ ಹೆಚ್ಚು ಬಿಡುವಿನ ಸಮಯವಿದ್ದುದರಿಂದ ಚಿತ್ರಕಲೆಗೆ ಹೆಚ್ಚು ಆಸಕ್ತಿ ಕೊಡಲು ಸಾಧ್ಯವಾಯಿತು. ಜಾಹಿರಾತುಗಳು ಮತ್ತು ಪತ್ರಿಕೆಗಳ ಮುಖಪುಟಗಳನ್ನು ವಿನ್ಯಾಸ ಮಾಡಿ ಬರುವ ಸಂಭಾವನೆಯಿಂದ ತನ್ನದೇ ಆದ ಒಂದು ಸುಸಜ್ಜಿತ ಸ್ಟುಡಿಯೋ ಹೊಂದಲು ಸಾಧ್ಯವಾಯಿತು.

ಸಾಮಾನ್ಯ ಜನರ ದಿನನಿತ್ಯದ ಜೀವನದ ಚಿತ್ರಣವೇ ರಾಕ್‌ವೆಲ್‌ರ ವಿಶೇಷತೆ ಆರಿಸಿಕೊಳ್ಳುತ್ತಿದ್ದ ರೂಪದರ್ಶಿಗಳು (ವಯಸ್ಸಿಗನುಗುಣವಾಗಿ) ಬಣ್ಣ ಮತ್ತು ಬೆಳಕಿನ ಸಂಯೋಜನೆ, ಮುಖಭಾವಗಳು, ಘಟನೆ, ಪರಿಸರ ಮತ್ತು ಸೂಕ್ಷ್ಮ ವಿಷಯಗಳಿಗೆ ಕೊಡುತ್ತಿದ್ದ ಪ್ರಾಮುಖ್ಯತೆ ಕಲಾ ಲೋಕದಲ್ಲಿ ಅವರಿಗೊಂದು ವಿಶಿಷ್ಠ ಸ್ಥಾನವನ್ನು ನೀಡಿರುವುದು ಸಹಜವೇ. ಉದಾಹರಣೆಗೆ ಈ ಲೇಖನದೊಂದಿಗೆ ನೀಡಿರುವ "ಸ್ಕೌಟ್ ಮಾಸ್ಟರ್" ಎನ್ನುವ ಕಲಾಕೃತಿಯಲ್ಲಿ, ನಡು ರಾತ್ರಿಯಲ್ಲಿ ಟೆಂಟ್‌ಗಳ ಮುಂದೆ ನಿಂತು ಬೆಂಕಿಯನ್ನು ನಂದದಂತೆ ಕಾಪಾಡುತ್ತಾ ಮಕ್ಕಳ ರಕ್ಷಕರಂತೆ ನಿಂತಿರುವ ಸ್ಕೌಟ್ ಮಾಸ್ಟರ್‌ನ ನಿಲುವು ಮತ್ತು ಮುಖದ ಭಾವನೆ ವರ್ಣನಾತೀತ. ಬಹಳಷ್ಟು ನಿಯತಕಾಲಿಕೆಗಳಿಗೆ ಮುಖಪುಟ ವಿನ್ಯಾಸ ಮಾಡಿದ ಖ್ಯಾತಿ ರಾಕ್‌ವೆಲ್‌ಗೆ ಇದ್ದರೂ, "ಬಾಯ್ಸ್ ಲೈಫ್" (ಬಾಯ್ ಸ್ಕೌಟ್ ಆಫ್ ಅಮೇರಿಕಾದ ಮಾಸ ಪತ್ರಿಕೆ) ಮತ್ತು ಸ್ಯಾಟರ್‌ಡೇ ಈವನಿಂಗ್ ಪೋಸ್ಟ್, ಅವರ ಜೀವನ ಮಿತ್ರರಾಗಿ ಕೊನೆಯ ತನಕ ಉಳಿದವು.

ರಾಕ್‌ವೆಲ್‌ರ ಚಿತ್ರಗಳ ವಿಶೇಷವೇನೆಂದರೆ, ಒಂದು ಪ್ರಮುಖ ಪಾತ್ರದ ಸುತ್ತ ವಿವಿಧ ಭಾವನೆಗಳ ಬೇರೆ ಬೇರೆ ವಯೋಮಾನದ ಮುಖಗಳಿರುವ ಕೃತಿಯು ಒಂದು ಕಾದಂಬರಿಯ ಹಾಗೆ ಕಥೆ ಹೇಳುತ್ತದೆ. ಇವರು ತಮ್ಮ ಚಿತ್ರಗಳಿಗಾಗಿ ಎಷ್ಟು

ಸಂಶೋಧನೆ ಮಾಡುತ್ತಿದ್ದರು ಎಂದರೆ, ಟಾಮ್ ಸಾಯರ್ ಮತ್ತು "ಹಕಲ್ ಬರಿ ಫಿನ್" ಪುಸ್ತಕಗಳಿಗೆ ಜೀವನ ಕ್ರಮ ಅಧ್ಯಯನ ಮಾಡಲು ಆ ಪ್ರದೇಶಗಳಲ್ಲಿ ಸಂಚಾರ ಮಾಡಿ, ಸ್ಥಳೀಯರೊಂದಿಗೆ ವಾಸಿಸಿ, ಅವರ ಉಡುಗೆ ತೊಡುಗೆ ಹಾವ ಭಾವಗಳನ್ನು ಕೂಡಾ ಗ್ರಹಿಸಿ ಅತ್ಯಂತ ಸಹಜವಾಗಿ ರೂಪಿಸಿರುವ ಈ ಚಿತ್ರಗಳು ಅವರ ಸೃಜನಶೀಲತೆ, ಪ್ರತಿಭೆ ಮತ್ತು ಪರಿಶ್ರಮಕ್ಕೆ ಸಾಕ್ಷಿಯಾಗಿದೆ.

ರಾಕ್‌ವೆಲ್ಲರ ಸಾಮಾಜಿಕ ಕಾಳಜಿ ಅನುಕರಣೀಯ. ಎರಡನೇ ಮಹಾಯುದ್ಧದ ದುಷ್ಪರಿಣಾಮಕ್ಕೆ ಒಳಗಾದ ಮಕ್ಕಳನ್ನು ಕುರಿತು. "ಮಕ್ಕಳಿಗಾಗಿ ಮಕ್ಕಳ ಅಭಿಯಾನ" ಎನ್ನುವ ಬಿತ್ತಿ ಚಿತ್ರವನ್ನು ರಚಿಸಿ ಅಧ್ಯಕ್ಷ ರೂಸ್‌ವೆಲ್ಟ್‌ಗೆ ನೀಡಿದರು. ಅದ್ಭುತ ಸಂದೇಶ ಹೊತ್ತಿರುವ ಈ ಬಿತ್ತಿ ಚಿತ್ರವು ಇಂದಿಗೂ, ಸರ್ವಕಾಲಿಕ ಉತ್ತಮ ಚಿತ್ರಗಳೊಂದೆಂದು ಪರಿಗಣಿಸಲ್ಪಡುತ್ತದೆ.

1942 ರಲ್ಲಿ ತನ್ನ ದೇಶ (ಅಮೇರಿಕ) ಯಾವ ಮೌಲ್ಯಕ್ಕಾಗಿ ಎರಡನೇ ಮಹಾಯುದ್ಧ ಪ್ರವೇಶಿಸಿತೋ ಅದನ್ನು ನಿರೂಪಿಸಲು ನಾಲ್ಕು ಬಗೆಯ ಸ್ವಾತಂತ್ರ್ಯಗಳ ಚಿತ್ರ ರಚಿಸಿದರು. ಅವುಗಳೆಂದರೆ, ಅರಾಧನಾ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಭಯದಿಂದ ಮುಕ್ತಿಯ ಸ್ವಾತಂತ್ರ್ಯ ಮತ್ತು ಅವಶ್ಯಕತೆಗಳಿಂದ ಮುಕ್ತಿಯ ಸ್ವಾತಂತ್ರ್ಯ ಈ ನಾಲ್ಕು ತೈಲ ಚಿತ್ರಗಳನ್ನು ಅಮೇರಿಕಾದ ಉದ್ದಗಲಕ್ಕೂ ಪ್ರದರ್ಶಿಸುತ್ತಾ, 130 ಮಿಲಿಯನ್ ಡಾಲರ್‌ಗಿಂತಲೂ ಹೆಚ್ಚು ಯುದ್ಧ ನಿಧಿ ಸಂಗ್ರಹಿಸಿದ್ದು ಒಂದು ದಾಖಲೆಯೇ ಸರಿ. ನೊಂದವರಿಗಾಗಿ ಅವರ ಮನ ಸದಾ ಮಿಡಿಯುತ್ತಿತ್ತು. ಮನೆಗೆ ಹಿಂದಿರುಗುತ್ತಿರುವ ಒಬ್ಬ ದಣಿದ ಯೋಧ, ಯುದ್ಧ ಭೂಮಿಯಲ್ಲಿ ಬಟ್ಟಲಲ್ಲಿ ಗಂಜಿ ಹಿಡಿದು ದೇವರಿಗೆ ಕೃತಜ್ಞತೆ ಸಲ್ಲಿಸುತ್ತಿರುವ ಸೈನಿಕ, ಸೈನಿಕನೊಬ್ಬನೆ ಹರಿದ ಬಟ್ಟೆ ತೊಟ್ಟಿರುವ ನಿರಾಶ್ರಿತ, ಹೀಗೆ ಯುದ್ಧದ ಹತ್ತು ಹಲವು ಕರಾಳ ಮುಖಗಳನ್ನು ತನ್ನ ಕಲಾಕೃತಿಗಳಲ್ಲಿ ಬಿಂಬಿಸುವುದರ ಮೂಲಕ ತಮ್ಮ ಮನದ ವೇದನೆಯನ್ನು ವ್ಯಕ್ತಪಡಿಸುತ್ತಾರೆ.

ಪ್ರಮುಖ ಸ್ಕೌಟಿಂಗ್ ಪುಸ್ತಕಗಳಲ್ಲೆಲ್ಲಾ ಇವರ ಅಸಾಧಾರಣ ಚಿತ್ರಗಳು ಚಳವಳಿಯ ಎಲ್ಲಾ ಚಟುವಟಿಕೆಗಳನ್ನು ನಮ್ಮ ಕಣ್ಣಮುಂದೆ ಅಚ್ಚು ಒತ್ತಿದಂತೆ ಮೂಡಿಸುತ್ತದೆ.

ಮಕ್ಕಳ ವ್ಯಕ್ತಿತ್ವದ ವಿವಿಧ ಮುಖಗಳನ್ನು ಮತ್ತು ಅವರ ಸ್ಕೌಟಿಂಗ್ ದಿನಚರಿಯನ್ನು ಒಂದು ರೂಪಕದಂತೆ ನಮ್ಮ ಸ್ಮೃತಿ ಪಟಲದ ಮೇಲೆ ಅಚ್ಚಳಿಯದಂತೆ ಮಾಡಿರುವ ಈ ಮಹಾನ್ ಕಲಾಕಾರ ರಾಕ್‌ವೆಲ್‌ಗೆ ಒಂದು ಸಲಾಮ್.

## ಸ್ಕೌಟ್-ಗೈಡ್ ರಸಪ್ರಶ್ನೆ

ಪ್ರತಿ ತಿಂಗಳು 10 ಸ್ಕೌಟ್-ಗೈಡ್ ಸಂಬಂಧಿತ ಪ್ರಶ್ನೆಗಳನ್ನು ಕೇಳಲಾಗುವುದು. ಉತ್ತರಗಳನ್ನು ಅದೇ ತಿಂಗಳ 25ನೇ ತಾರೀಖಿನೊಳಗೆ ಕಳುಹಿಸುವುದು. ಸರಿ ಉತ್ತರ ನೀಡಿದವರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

**ರಸಪ್ರಶ್ನೆ – 01**

1. ಬೇಡನ್ ಪೋವೆಲ್ ರವರು ತಮ್ಮ ಕೊನೆಯ ದಿನಗಳನ್ನು ........................... ದೇಶದ ................ ನಲ್ಲಿ ಕಳೆದರು.
2. ಬೆಂಕಿ ಆರಿಸಲು ಸ್ಕೌಟ್‌ಗಳು ಸಾಲಾಗಿ ನಿಂತು ಒಬ್ಬರಿಂದ ಒಬ್ಬರಿಗೆ ಸರಪಳಿಯಲ್ಲಿ ನೀರನ್ನು ಬಕೆಟ್ ಮೂಲಕ ಸಾಗಿಸುವ ವಿಧಾನಕ್ಕೆ ಏನೆಂದು ಕರೆಯುತ್ತಾರೆ?
3. ಪ್ರಾಣಿಗಳ ಹೆಜ್ಜೆ ಗುರುತು ಅಚ್ಚು ತೆಗೆಯಲು ಉಪಯೋಗಿಸುವ ಬಿಳಿ ಪುಡಿ ಯಾವುದು?
4. ಕರ್ನಾಟಕ ರಾಜ್ಯ ಸಂಸ್ಥೆಯ ಹಾಲಿ ರಾಜ್ಯ ಕಾರ್ಯದರ್ಶಿ ................................................
5. ಕೈ ತೊಳೆಯುವ ಚಿನ್ಹೆಯಿರುವ ಪ್ರಾವಿಣ್ಯತಾ ಪದಕ ಯಾವುದು?
6. ಗ್ರಿಡ್ ಅಥವಾ ಟೋಪೊಗ್ರಾಫಿಕಲ್ ನಕಾಶೆಯಲ್ಲಿ ದಕ್ಷಿಣದಿಂದ ಉತ್ತರಕ್ಕೆ ಸಂಖ್ಯೆ ನೀಡಿರುವ ರೇಖೆಗಳಿಗೆ ............................ ಎನ್ನುತ್ತಾರೆ.
7. ಒ ಅಥವಾ ಫ ಆಕಾರದಲ್ಲಿರುವ ನಕ್ಷತ್ರ ಪುಂಜಕ್ಕೆ ಇಂಗ್ಲೀಷ್ ಹೆಸರೇನು?
8. WAGGGS ಅನ್ನು ವಿಸ್ತರಿಸಿ
9. ಟೆಂಟಿನ ಗೈ ಹಗ್ಗವನ್ನು ಗೂಟಕ್ಕೆ ಕಟ್ಟಲು ಉಪಯೋಗಿಸುವ ಗಂಟು ಯಾವುದು?
10. ಲಂಡನ್ನಿನ ಸಮೀಪದಲ್ಲಿರುವ ಅಂತರ ರಾಷ್ಟ್ರೀಯ ತರಬೇತಿ ಕೇಂದ್ರ ಗಿಲ್‌ವೆಲ್ ಪಾರ್ಕ್ ಮೂಲ ನಿವೇಶನವನ್ನು ಸ್ಕೌಟ್ ಸಂಸ್ಥೆಗೆ ನೀಡಿದ ದಾನಿ ಯಾರು?

**ವಿ.ಸೂ.: ಸರಿಯಾದ ಉತ್ತರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.**

## ಜೀವಕ್ಕೆ ಜೀವ ಜಲ

– ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ

ನಮ್ಮ ಶರೀರದಲ್ಲಿ 90% ನೀರು ಇದೆ. ನೀರಿನ ಅಂಶ ಕಡಿಮೆ ಆದರೆ ಸುಸ್ತಾಗುತ್ತದೆ. ನೀರಿಲ್ಲದೆ ನಾವು ಕೇವಲ ಮೂರು ದಿನ ಬದುಕ ಬಹುದು! ಆದರೆ ನೀರಿನ ದಾಹ ತೀರಿಸಲು ಕಲುಷಿತ ನೀರು ಕುಡಿದು ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಾರೆ ಜನ ವಿಶ್ವ ಆರೋಗ್ಯ ಸಂಸ್ಥೆಯ (ಡಬ್ಲೂಹೆಚ್ಓ) ಪ್ರಕಾರ ಭಾರತ' ಪ್ರತೀವರ್ಷ 19,550 ಕೋಟಿ ರೂಪಾಯಿಗಳನ್ನು ಕೇವಲ ನೀರಿನಿಂದ ಬಂದ ಕಾಯಿಲೆಗಳನ್ನು ನಿಯಂತ್ರಿಸಲು ಖರ್ಚು ಮಾಡುತ್ತಿದೆ ! ಇದು ದುರಂತವೇ ಸರಿ. ನಮ್ಮ ದೇಶದ ಜನಸಂಖ್ಯೆ 1.3 ಬಿಲಿಯನ್ ಆದರೆ ಭಾರತದಲ್ಲಿ ಪ್ರತೀದಿನ 4 ಮಿಲಿಯನ್ ಭೇದಿ ಮಾಡಿಕೊಳ್ಳುತ್ತಾರೆ ಎಂದರೆ ದುಃಖವಾಗುತ್ತದೆ. ಕಲುಷಿತ ನೀರಿನಿಂದ ಕಾಲರಾ, ವಾಂತಿ ಭೇದಿ, ಅಮೀಬಿಯಾಸಿಸ್, ಜಿಯಾರ್ಡಿಯಾಸಿಸ್, ಕಾಮಾಲೆ (ಎಚಿಣಟಿಜುಭಿಜ) ಹೀಗೆ ಹತ್ತು ಹಲವು ಕಾಯಿಲೆಗಳು ಉಂಟಾಗುತ್ತವೆ. 80% ಸಾಂಕ್ರಾಮಿಕ ಕಾಯಿಲೆಗಳು ನಾವು ಕಲುಷಿತ ನೀರನ್ನು ಕುಡಿಯುವುದರಿಂದ ಉಂಟಾಗುತ್ತದೆ. ಇದಕ್ಕೆ ಕಾರಣ ನಮ್ಮ ಕೆರೆ, ಬಾವಿ ನದಿಗಳಲ್ಲಿ ಮೋರಿ ನೀರು ಬಿಡುತ್ತಿರುವುದು ತರಕಾರಿಗಳನ್ನು ಮೋರಿ ನೀರಿನಲ್ಲಿ ಬೆಳೆಸುತ್ತಿರುವುದು ಅತ್ಯಂತ ಪವಿತ್ರವಾದ ಗಂಗೆ ಕೂಡ ಕಲುಷಿತಗೊಂಡಿತ್ತು. ಈಗ ನಮಾಮಿ ಗಂಗೆಯಡಿಯಲ್ಲಿ ಕಲುಷಿತಗೊಳ್ಳುವುದನ್ನು ತಡೆಗಟ್ಟುವ ಪ್ರಯತ್ನ ನಡೆದಿದೆ. ಬೋರ್‌ವೆಲ್ಲಿನಿಂದ ಬರುವ ನೀರಲ್ಲಿ ಫ್ಲೋರೈಡ್ ಹೆಚ್ಚಿರುವುದರಿಂದ ಮೂಳೆ ಹಲ್ಲು ವಿಕಾರಗೊಳ್ಳುತ್ತವೆ. ಇಪ್ಪತ್ತನೇ ಶತಮಾನದ ಅತ್ಯುತ್ತಮ ಅವಿಷ್ಕಾರವೆಂದರೆ 'ಕ್ಲೋರಿನ್' ಇದರಿಂದ 99% ನೀರು ಶುಚಿಯಾಗುತ್ತದೆ ಆದರೂ ಜನ ನೀರನ್ನು ಕಾಯಿಸಿ ಆರಿಸಿ ಕುಡಿಯುವುದು ಮುಖ್ಯ ಅದರಲ್ಲೂ ಬೇಸಿಗೆ ಕಾಲದಲ್ಲಿ ಬಾಯಾರಿಕೆಗೆ ಸಿಕ್ಕ ಸಿಕ್ಕಲ್ಲಿ ಕಲುಷಿತ ನೀರು ಕುಡಿದರೆ ವಾಂತಿ ಭೇದಿ ಆಗುತ್ತದೆ. ಇದರಿಂದ ಶರೀರದಲ್ಲಿರುವ ನೀರಿನಂಶ ವಿಪರೀತ ಕಡಿಮೆ ಆಗಿ ಅದರಲ್ಲೂ ಪುಟ್ಟ ಮಕ್ಕಳು ಮುದುಕರು ಜಜ್ಞುಥಿಜಡಿಚಿಣಐಂಟಿ ನಿಂದ ಸಾವನ್ನಪ್ಪುತ್ತಾರೆ. ಇದನ್ನು ತಪ್ಪಿಸಬೇಕೆಂದರೆ ನಾವು ನಮ್ಮ ಕೈ ಸ್ವಚ್ಛವಾಗಿ ತೊಳೆದುಕೊಂಡು ಕುಡಿಯುವ ನೀರನ್ನು ಕಚ್ಚಿ ಕುಡಿಯದೆ ಶುಚಿಯಾದ ಶುದ್ಧ ಲೋಟದಲ್ಲಿ ಕುಡಿಯಬೇಕು. ಬಾಟಲಿ ನೀರಿನ ಬದಲು ಎಳೆನೀರು ಕುಡಿಯುವುದು ಉತ್ತಮ ದಿನಕ್ಕೆ 2 ಲೀಟರ್ ನೀರು ಕುಡಿದರೆ ಆರೋಗ್ಯಕ್ಕೆ ಒಳ್ಳೆಯದು.

## ಟೆಲಿಪ್ರಸೆನ್ಸ್ ಸಾಧನ!

– ಚಳ್ಳಕೆರೆ ಯರ್ರಿಸ್ವಾಮಿ



ವಿಜ್ಞಾನ–ವಿಸ್ಮಯ

ಗೆಳೆಯರೇ, ಆಧುನಿಕ ಜಗತ್ತು ಹೊಸ ತಂತ್ರಜ್ಞಾನಗಳ ಆನ್ವೇಷಣೆಗೆ ತೊಡಗಿರುವಂತೆ ಹೊಸ ಹೊಸ ಸಾಧನಗಳ ನಿರ್ಮಾಣವೂ ಕೂಡಾ ಜೊತೆಯಲ್ಲಿಯೇ ಸಾಗುತ್ತಿದೆ. ಆಧುನಿಕ ಮನುಷ್ಯನ ಇಂತಹದೊಂದು ಅಚ್ಚರಿಯ ಹಾಗೂ ಉಪಯುಕ್ತ ಸೃಷ್ಟಿಯೇ ಈ ಟೆಲಿಪ್ರೆಸೆನ್ಸ್ ಎಂಬ ಸಾಧನ !

ತಲೆಗೆ ಧರಿಸುವ ಸಾಧನ ಹಾಗೂ ಅದಕ್ಕೆ ಸಂಬಂಧಿಸಿದ ಕಂಟ್ರೋಲಿಂಗ್ ಟ್ರಂಕ್ ಅನ್ನು ಧರಿಸಿದ ವ್ಯಕ್ತಿ ಎಲ್ಲೇ ಸುಳಿದಾಡಲಿ, ಆತ ನೋಡುವುದೆಲ್ಲಾ, ಕೇಳುವುದೆಲ್ಲಾ ದೂರದಲ್ಲಿಕುಳಿತ ಇನ್ನೊಬ್ಬ ವ್ಯಕ್ತಿಗೆ ಕಾಣುತ್ತದೆ ಮತ್ತು ಕೇಳುತ್ತದೆ. ದೂರದಲ್ಲಿ ಅಂದರೆ, ಸಾವಿರಾರು ಕಿಲೋಮೀಟರುಗಳಾಚೆ ಅಥವಾ ದೂರದ ಇನ್ನೊಂದು ದೇಶದಲ್ಲಿ ಕುಳಿತ ವ್ಯಕ್ತಿಗೆ ಕೂಡಾ. ಅಲ್ಲದೆ ಅಲ್ಲಿ ದೂರದಲ್ಲಿ ಕುಳಿತ ವ್ಯಕ್ತಿಟೆಲಿಪ್ರೆಸೆನ್ಸ್ ಸಾಧನ ಧರಿಸಿದ ವ್ಯಕ್ತಿಗೆ ಅಗತ್ಯವಾದ ಮಾರ್ಗದರ್ಶನವನ್ನು ಆತ ಧರಿಸಿದ ಕಣ್ಣಗಲದ ಟಿ.ವಿ. ಪರದೆಯ ಮೂಲಕ ನೀಡಬಹುದು.

ವಿಷಯ ತಜ್ಞನಲ್ಲದ ವ್ಯಕ್ತಿಗೆ, ವಿಷಯ ತಜ್ಞನೊಬ್ಬನು ದೂರದಲ್ಲಿ ಕುಳಿತೇ ಮಾರ್ಗದರ್ಶನ ಮಾಡುತ್ತಾ ಎಂಥಾ ಸಂಕೀರ್ಣ ಕೆಲಸಗಳನ್ನೂ ಸುಲಭವಾಗಿ, ಯಶಸ್ವಿಯಾಗಿ ಮಾಡಬಹುದು, ನಿರ್ವಹಿಸಬಹುದು. ಟೆಲಿಪ್ರೆಸೆನ್ಸ್ ಸಾಧನವನ್ನು ಹೆಚ್ಚಾಗಿ ರಾಷ್ಟ್ರೀಯ ಭದ್ರತಾಪಡೆಗಳ ಕಮಾಂಡೋಗಳು, ವಿಪತ್ತು ನಿರ್ವಹಣಾ ಪಡೆಗಳ ಯೋಧರು ಬಳಸುತ್ತಾರೆ. ಈಚಿನ ವರ್ಷಗಳಲ್ಲಿ ಈ ಸಾಧನವನ್ನು ವೈದ್ಯಕೀಯ ರಂಗದಲ್ಲಿ ಸಂಕೀರ್ಣ ಶಸ್ತ್ರಚಿಕಿತ್ಸೆಗಳ ಸಂದರ್ಭಗಳಲ್ಲಿ ತಜ್ಞ ವೈದ್ಯರ ನೆರವು ಪಡೆಯಲೂ ಬಳಸಲಾಗುತ್ತಿದೆ. ಹೀಗೆ ಟೆಲಿಪ್ರೆಸೆನ್ಸ್ ಸಾಧನ ಈಗ ಜೀವರಕ್ಷಕ ಸಾಧನವಾಗಿಯೂ ಬಳಕೆಯಾಗುತ್ತಿದೆ.

# Being a Scout or Guide 'Can Help to Improve Mental Health in Later Life'

***Joining the Scouts or Guides to helps to lower the risk of mental illness in later life, a study suggests.***

Children who participate in the organisations - which aim to develop qualities such as self-reliance, resolve and a desire for self-learning - are likely to have better mental health in middle age, the findings show.

Such activities, which frequently involve being outdoors, also seem to remove the relatively higher likelihood of mental illness in those from poorer backgrounds.

The findings were drawn from a lifelong study of almost 10,000 people from across the UK who were born in November 1958, known as the National Child Development Study.



Scientists from the universities of Edinburgh and Glasgow, who analysed the data, found those who had belonged to the groups tended to have better mental health aged 50.

Around one-quarter of study participants had been in the Scouts or Guides, and those were found to be around 15% less likely to suffer from anxiety or mood disorders, compared with others.

Lead researcher Professor Chris Dibben, of the University of Edinburgh's School of GeoSciences, said: "It is quite startling that this benefit is found in people so many years after they have attended Guides or Scouts.

"We expect the same principles would apply to the Scouts and Guides of today and so, given the high costs of mental ill health to individuals and society, a focus on voluntary youth programmes such as the Guides and Scouts might be very sensible."

Researchers say their findings suggest programmes that help children develop skills such as self-reliance and teamwork, and encourage being active outdoors, may have lifelong benefits.

Attending the Guides or Scouts may help to build resilience against common stresses in life, or it may increase a person's chances of achieving more in life, so they are less likely to experience such stresses, researchers suggest.

The study, supported by the Economic and Social Research Council, was published in the Journal of Epidemiology and Community Health.

Professor Richard Mitchell, of the Centre for Research on Environment, Society and Health at the University of Glasgow, said: "Governments and health services around the world struggle to do something about the health gap between richer and poorer people, so this new evidence that being a Scout or Guide can help is very important."





Bear Grylls, chief Scout at the Scout Association, said: “I am really proud that Scouting provides young people with an opportunity to develop the skills they need to be resilient and deal with what life throws at them.



“Through initiatives such as our A Million Hands Campaign, the Scout Association is helping give young people the ability to develop mental wellbeing throughout their lives.”

Emma Brodey, 18, a member of the Girlguiding Advocate Panel, said: “Women tell us every week that their accomplishments and memories through Guiding have lasted throughout their lives, so it’s amazing to see research showing the long-term benefits of being a member of Girlguiding.”

## ಮೂಗಿನಿಂದ ರಕ್ತ ಬರುವುದು

ಬೇಸಿಗೆಯ ಬಿಸಿಲಿನಲ್ಲಿ ಮಕ್ಕಳ ಆಟವಾಡಿ ಬಂದ ತಕ್ಷಣ ಮೂಗಿನಿಂದ ರಕ್ತ ಬರುವುದನ್ನು ಎಲ್ಲರೂ ಗಮನಿಸಿರುತ್ತೇವೆ. ಕೆಲವು ವಯಸ್ಕರಲ್ಲಿಯೂ ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ತಿರುಗಾಡಿ ಬಂದ ಕೂಡಲೇ ಮೂಗಿನಿಂದ ರಕ್ತ ಬರುತ್ತದೆ. ಅತಿಯಾದ ಉಷ್ಣತೆಯಿಂದ, ಬಿಸಿಲಿನ ತಾಪ, ಮೂಗಿನ ಭಾಗದಲ್ಲಿ ಇಲ್ಲವೇ ತಲೆಗೆ ಪೆಟ್ಟು ಬೀಳುವುದರಿಂದ, ಮೂಗಿನ ಒಳಭಾಗಗಳು ಒಣಗುವುದರಿಂದ ಮೂಗಿನಿಂದ ರಕ್ತ ಬರುತ್ತದೆ. ವಯಸ್ಕರಲ್ಲಿ ಈ ರೀತಿ ಆದಲ್ಲಿ ಅವರ ರಕ್ತದೊತ್ತಡವನ್ನು ಪರೀಕ್ಷಿಸಬೇಕು. ಅಲ್ಲದೇ ಅವರು ತೆಗೆದುಕೊಳ್ಳುತ್ತಿರುವ ಔಷಧಿಯನ್ನು ಗಮನಿಸಬೇಕು. ಕೆಲವು ಔಷಧಿಗಳ ಪಾರ್ಶ್ವ ಪರಿಣಾಮವಿದ್ದಲ್ಲಿ ಹೀಗಾಗಬಹುದು.

**ಮೂಗಿನಿಂದ ಜೋರಾಗಿ ಗಾಳಿ ಹೊರಹಾಕಬೇಕು:** ಜೋರಾಗಿ ಗಾಳಿ ಹೊರಹಾಕುವುದರಿಂದ ಒಳಗಡೆಯಿಂದ ರಕ್ತ ಹೆಪ್ಪುಗಟ್ಟಿದ್ದಲ್ಲಿ ಹೊರಬರುತ್ತದೆ. ಆಗ ತಾನಾಗಿಯೇ ರಕ್ತ ನಿಲ್ಲುತ್ತದೆ.

**ಮಂಜುಗಡ್ಡೆಯನ್ನು ಮೂಗಿನ ಮೇಲಿರಿಸಬೇಕು:** ವ್ಯಕ್ತಿಯನ್ನು ಮಲಗಿಸಿ ಕುತ್ತಿಗೆಯ ಕೆಳಗೆ ದಿಂಬನ್ನಿರಿಸಬೇಕು. ನಂತರ ಮಂಜುಗಡ್ಡೆಯನ್ನು ಕರವಸ್ತ್ರದಲ್ಲಿಟ್ಟು ಅದರಿಂದ ಮೂಗಿನ ಎರಡೂ ಬದಿಗಲ್ಲಿ ಕೈಯಾಡಿಸುತ್ತಿರಬೇಕು.

**ತೇವವಿರುವ ಹತ್ತಿಯನ್ನಿರಿಸುವುದು:** ಹತ್ತಿಯನ್ನು ಸ್ವಲ್ಪ ತೇವ ಮಾಡಿಕೊಂಡು ಮೂಗಿನ ಹೊರಳೆಯ ಬಳಿ ಇರಿಸಬೇಕು. ವ್ಯಕ್ತಿ ನಿಂತುಕೊಂಡಿದ್ದಲ್ಲಿ ಇಲ್ಲವೇ ಮಲಗಿಕೊಂಡಿದ್ದಲ್ಲಿ ತಕ್ಷಣ ತಲೆಯನ್ನು ಹಿಂದಕ್ಕೆ ಬಾಗಿಸಬೇಕು.

**ಮನೆಮದ್ದು:**

* ಈರುಳ್ಳಿಯನ್ನು ಜಜ್ಜಿ ಮೂಗಿನ ಬಳಿ ಹಿಡಿದು ವಾಸನೆ ಗ್ರಹಿಸಲು ಹೇಳಬೇಕು.
* ಸೊಗದ ಬೇರಿನ ಕಷಾಯವನ್ನು ದಿನಕ್ಕೆ ಮೂರ್ನಾಲ್ಕು ಬಾರಿ ಕುಡಿಯಬೇಕು.
* ಒಂದು ಚಮಚೆ ನೆಲ್ಲಿಕಾಯಿ ಪುಡಿಯನ್ನು ತುಪ್ಪದಲ್ಲಿ ಬೆರೆಸಿ ಸೇವಿಸಬೇಕು. ಅಲ್ಲದೇ ಇದನ್ನು ಹಣೆಗೆ, ಮೂಗಿಗೆ ಹಚ್ಚಬೇಕು.
* ದಾಳಿಂಬೆ ಹೂವಿನ ರಸವನ್ನು 4 ರಿಂದ 5 ಹನಿಗಳಷ್ಟನ್ನು ಮೂಗಿಗೆ ಹಿಂಡಬೇಕು.
* ಉತ್ತರಾಣಿಯ ಎಲೆಯ ರಸವನ್ನು ಮೂಗಿಗೆ ಹಾಕಬೇಕು.
* ವ್ಯಕ್ತಿಯ ತಲೆಗೆ ನೀರನ್ನು ತಟ್ಟಬೇಕು.
* ಉಸಿರಾಟಕ್ಕೆ ತೊಂದರೆಯಾಗದಂತೆ ರಕ್ತಸ್ರಾವವಾಗುವ ಮೂಗಿನ ಹೊರಳೆಯನ್ನು ಸ್ವಲ್ಪ ಸಮಯದವರೆಗೆ ಒತ್ತಿ ಹಿಡಿಯಬೇಕು.
* ತಣ್ಣೀರಿನಿಂದ ತೋಯಿಸಿದ ಬಟ್ಟೆಯನ್ನು ಮೂಗಿನ ಮೇಲಿಟ್ಟು ತಣ್ಣನೆಯ ನೀರನ್ನು ಸರಿಯಬೇಕು.

– ಡಾ. ವಸುಂಧರ ಭೂಪತಿ

# ಶ್ರದ್ಧಾಂಜಲಿ





ಶ್ರೀ ಎಸ್. ಓಮೇಶ್ವರಯ್ಯ, ನಿವೃತ್ತ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಇವರು ಮಾರ್ಚ್ 8, 2019 ಶುಕ್ರವಾರದಂದು ಬೆಂಗಳೂರಿನಲ್ಲಿ ನಿಧನರಾದರು. ಇವರು ಸ್ಕೌಟ್ ವಿಭಾಗದಲ್ಲಿ ಎ.ಎಲ್.ಟಿ. ತರಬೇತುದಾರರಾಗಿದ್ದು, ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ಎಸ್.ಜಿ.ವಿಯಾಗಿ, ವಾರ್ಡನ್ ಆಗಿ ಹಾಗೂ ಎ.ಎಸ್.ಓ.ಸಿ. ಆಗಿ ಉತ್ತಮ ಸೇವೆ ಸಲ್ಲಿಸಿ ಇತ್ತೀಚೆಗಷ್ಟೆ ನಿವೃತ್ತರಾಗಿದ್ದರು. ಇವರಿಗೆ 61 ವರ್ಷ ವಯಸ್ಸಾಗಿತ್ತು.

ಶ್ರೀಯುತರು ತಮ್ಮ ಪತ್ನಿ ಶ್ರೀಮತಿ ವಾಣಿ ಹಾಗೂ ಒಬ್ಬ ಪುತ್ರ, ಪುತ್ರಿ ಹಾಗೂ ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ. ಶ್ರೀ ಓಮೇಶ್ವರಯ್ಯ ಅವರ ಆತ್ಮಕ್ಕೆ ಶಾಂತಿ ನೀಡಲು ಹಾಗು ಅವರ ಕುಟುಂಬದವರಿಗೆ, ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.





ಶ್ರೀಮತಿ ಬಿ.ಟಿ. ಸೀತಾದೇವಿ, ನಿವೃತ್ತ ಶಿಕ್ಷಕರು, ಗೋಪಾಲಸ್ವಾಮಿ ಶಿಶುವಿಹಾರ, ಮೈಸೂರು ಹಾಗೂ ಅಜೀವ ಸದಸ್ಯರು, ಭಾರತ್ ಸ್ಕೌಟ್ಸ್-ಗೈಡ್ಸ್, ಮೈಸೂರು ಜಿಲ್ಲಾ ಸಂಸ್ಥೆ ಇವರು ದಿನಾಂಕ 25-02-2019 ರಂದು ಮೈಸೂರಿನಿಲ್ಲಿ ನಿಧನ ಹೊಂದಿದರು. ಇವರು ಬುಲ್‌ಬುಲ್ ವಿಭಾಗದಲ್ಲಿ ಎ.ಎಲ್.ಟಿ. ತರಬೇತುದಾರರಾಗಿದ್ದು, ಉತ್ತಮ ಫ್ಲಾಕ್ ಲೀಡರ್ ಆಗಿ ಸೇವೆ ಸಲ್ಲಿಸುತ್ತಿದ್ದರು ಹಾಗೂ ಉತ್ತಮ ಶಿಕ್ಷಕಿಯಾಗಿದ್ದರು.

ಇವರ ನಿಧನದಿಂದ ಉಂಟಾದ ದುಃಖವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಮತ್ತು ಬಂಧು-ಮಿತ್ರರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**- ರಾಜ್ಯ ಕಾರ್ಯದರ್ಶಿ**




ಇತ್ತೀಚೆಗೆ ಉಡುಪಿಯಲ್ಲಿ ನಡೆದ ರೋವರ್-ರೇಂಜರ್ ಮೂಟ್ ಉದ್ಘಾಟನಾ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಶಾಂತ ವಿ. ಆಚಾರ್ಯ ಅವರು ಮಾತನಾಡುತ್ತಿರುವುದು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಮಾರ್ಚ್ 16ರಂದು ಏರ್ಪಡಿಸಿದ ಚುನಾವಣೆ ಮಹತ್ವ ಹಾಗು ಮತದಾನ ಜಾಗೃತಿ ಅಭಿಯಾನದ ಬಗ್ಗೆ ತಹಶೀಲ್ದಾರರಾದ ಶ್ರೀ ಮಂಜುನಾಥ್ ಅವರು ಮಾಹಿತಿ ನೀಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ, ರೋವರ್ಸ್-ರೇಂಜರ್ಸ್ ಹಾಗು ಇತರರನ್ನು ಕಾಣಬಹುದು.





ಶಿವಮೊಗ್ಗ ಜಿಲ್ಲಾ ಸಂಸ್ಥೆಗೆ ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ ಅವರು ಫೆಬ್ರವರಿ 19ರಂದು ಭೇಟಿ ನೀಡಿ ಸ್ಕೌಟ್-ಗೈಡ್ ಚಟುವಟಿಕೆಗಳು ಹಾಗೂ ಕಾರ್ಯಕ್ರಮಗಳನ್ನು ಕುರಿತು ಜಿಲ್ಲಾ ಸಂಸ್ಥೆ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಉಮೇಶ್ ಶಾಸ್ತ್ರಿ, ಜಿಲ್ಲಾ ಖಜಾಂಚಿ ಶ್ರೀ ಚೂಡಾಮಣಿ ಇ. ಪವಾರ್ ಹಾಗು ಪದಾಧಿಕಾರಿಗಳೊಂದಿಗೆ ಚರ್ಚಿಸುತ್ತಿರುವುದು.

ಫೆಬ್ರವರಿ 27ರಂದು ನಡೆದ ಮಂಡ್ಯ ಜಿಲ್ಲೆ ಶ್ರೀ ಅರೆತಿಪ್ಪೂರು ದಿಗಂಬರ ಜೈನ ಮಠದ ಶ್ರೀಗಳ ಪಟ್ಟಾಭಿಷೇಕದ ಸಂದರ್ಭದಲ್ಲಿ ರೋವರ್-ರೇಂಜರ್‌ಗಳು ಸೇವೆ ಸಲ್ಲಿಸುತ್ತಿರುವುದು.



Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 44)

ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಏರ್ಪಡಿಸಿದ ಮತದಾನ ಜಾಗೃತಿ ಕಾರ್ಯಕ್ರಮ ಮತ್ತು ಸೇವಾ ಶಿಬಿರಗಳಲ್ಲಿ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿರುವುದು.
























If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : Chinnaswamy Reddy, Printed by : L. Lingappa M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26